RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಫೆಬ್ರವರಿ ೨೮, ೨೦೧೩ (ಫಾಲ್ಗುಣ ೯, ಶಕ ವರ್ಷ ೧೯೩೪)<br>Bangalore, Thursday, February 28, 2013 (Phalguna 9, Shaka Varsha 1934) | ಸಂಚಿಕೆ ೯<br>Issue 9 |
|---|---|---|


## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಸಂವ್ಯಶಾಇ 06 ಭಾನಿವಿ 2012, ಬೆಂಗಳೂರು, ದಿನಾಂಕ : 29–1–2013.**

**ವಿಷಯ** : ಭಾಷಾಂತರ ನಿರ್ದೇಶನಾಲಯದ ಗ್ರೂಪ್–ಎ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ : 1–1–2012 ರಲ್ಲಿರುವಂತೆ ಪ್ರಕಟಿಸುವ ಬಗ್ಗೆ.

**ಓದಲಾಗಿದೆ :** ಭಾಷಾಂತರ ನಿರ್ದೇಶಕರ ಪತ್ರ ಸಂಖ್ಯೆ : ಭಾನಿ 1/ಆಡಳಿತ/ಗ್ರೂಪ್–ಎ/ಜ್ಯೇಪಟ್ಟಿ/2013, ದಿನಾಂಕ : 3–1–2013

ಕರ್ನಾಟಕ ಸರ್ಕಾರಿ ನೌಕರರ (ಜ್ಯೇಷ್ಠತಾ) ನಿಯಮಗಳು, 1957ರ 10ನೇ ನಿಯಮದ(1)ನೇ ಉಪ–ನಿಯಮದನ್ವಯ ಭಾಷಾಂತರ ನಿರ್ದೇಶನಾಲಯದ ಗ್ರೂಪ್–ಎ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ : 1–1–2013ರಲ್ಲಿರುವಂತೆ ಅನುಬಂಧದಲ್ಲಿ ಲಗತ್ತಿಸಿ ಪ್ರಕಟಿಸಿದೆ.

**ಅನುಬಂಧ**

**ದಿನಾಂಕ : 1–1–2013ರಲ್ಲಿ ಇರುವಂತೆ ಭಾಷಾಂತರ ನಿರ್ದೇಶನಾಲಯದ ಗ್ರೂಪ್–ಎ ಅಧಿಕಾರಿಗಳ ಕರಡು ಜ್ಯೇಷ್ಠತಾ ಪಟ್ಟಿ**

| ಕ್ರ. ಸಂ. | ಅಧಿಕಾರಿಯ ಹೆಸರು | ನೇರ ನೇಮಕಾತಿ/ ಮುಂಬಡ್ತಿ ಇತರೆ | ಮೀಸಲಾತಿ/ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜ್ಯೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | **ಗ್ರೂಪ್–ಎ** | | | | | | |
| | **ಉಪ ನಿರ್ದೇಶಕರು (ರೂ. 36300–900–39000–1050–45300–1200–52500–1350–53850)** | | | | | | |
| 1. | ವೀರಭದ್ರಸ್ವಾಮಿ | ಮುಂಬಡ್ತಿ | ಪರಿಶಿಷ್ಟ ಜಾತಿ | 15–7–1954 | 7–12–1983 | 11–1–2012 | 11–1–2012 |
| 2. | ಐ.ಎಂ. ಕಂಬಳಿ | ಮುಂಬಡ್ತಿ | ಸಾಮಾನ್ಯ | 5–8–1958 | 14–6–1983 | 11–1–2012 | 11–1–2012 |
| 3. | ಜಿ. ಮಹದೇವ್ | ಮುಂಬಡ್ತಿ | ಸಾಮಾನ್ಯ | 17–5–1955 | 12–12–1983 | 6–11–2012 | 6–11–2012 |
| | **ಸಹಾಯಕ ನಿರ್ದೇಶಕರು (ರೂ. 28100–700–28800–800–33200–900–39000–1050–45300–1200–50100)** | | | | | | |
| 1. | ಎನ್. ಜಯಲಕ್ಷ್ಮಮ್ಮ | ಮುಂಬಡ್ತಿ | ಸಾಮಾನ್ಯ | 22–3–1953 | 1–6–1971 | 26–5–2011 | 26–5–2011 |
| 2. | ಎಂ. ವೆಂಕಟೇಶ | ಮುಂಬಡ್ತಿ | ಪರಿಶಿಷ್ಟ ಜಾತಿ | 12–11–1968 | 25–1–1999 | 11–1–2012 | 11–1–2012 |
| 3. | ಸಿ.ಎಂ. ಪ್ರಭುದೇವ | ಮುಂಬಡ್ತಿ | ಸಾಮಾನ್ಯ | 25–4–1953 | 23–2–1976 | 11–1–2012 | 11–1–2012 |

| | | | | | | | |
|---|---|---|---|---|---|---|---|
| 4. | ಎಂ. ನಾರಾಯಣಸ್ವಾಮಿ | ಮುಂಬಡ್ತಿ | ಪರಿಶಿಷ್ಟ ಪಂಗಡ | 1–6–1972 | 31–11–2003 | 27–6–2012 | 27–6–2012 |
| 5. | ಕೆ. ಉಮಾಲಕ್ಷ್ಮಿ | ಮುಂಬಡ್ತಿ | ಪರಿಶಿಷ್ಟ ಜಾತಿ | 9–7–1970 | 25–1–1999 | 27–9–2012 | 27–9–2012 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ಶ್ರೀಧರ್**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

**P.R. 106**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ :** ಸ್ಥಗಿತಗೊಂಡಿರುವ ಚಿಕ್ಕವ್ವನಾಗ್ತಿಹಳ್ಳಿ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ, ಚಿಕ್ಕವ್ವನಾಗ್ತಿಹಳ್ಳಿ, ದಾವಣಗೆರೆ–ತಾ. ಜಿಲ್ಲೆ, ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಸಂಖ್ಯೆ: ಸನಿ–31/ಸ್ಥಗಿತ/ಚಿ.ಹಾ.ಉ.ಮ.ಸ.ಸಂ.ನಿ/ಸಿಆರ್– / 2012–13, ದಿನಾಂಕ : 8–11–2012.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ 03 ವರ್ಷಗಳಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ, ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. ಈ ಬಗ್ಗೆ ಉಲ್ಲೇಖ (2) ರಲ್ಲಿ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂ. ಡಿಆರ್/ಡಿವಿಜಿ/ಎಲ್ ಕ್ಯೂಡಿ/ಸಿಆರ್–07/2012–13, ದಿನಾಂಕ : 28–12–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಓ : 139 : ಸಿಎಲ್ಎಂ : 2010, ದಿನಾಂಕ : 17–2–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಗುರುಸ್ವಾಮಿ, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಚಿಕ್ಕವ್ವನಾಗ್ತಿಹಳ್ಳಿ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ, ಚಿಕ್ಕವ್ವನಾಗ್ತಿಹಳ್ಳಿ ದಾವಣಗೆರೆ–ತಾ. ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ ಶ್ರೀ ಆರ್. ರಮೇಶ್, ಪ್ರಥಮ ದರ್ಜೆ ಸಹಾಯಕರು, ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ದಾವಣಗೆರೆ, ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ : 28–12–2012 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಗುರುಸ್ವಾಮಿ**
ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ

**P.R. 108**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ :** ಸ್ಥಗಿತಗೊಂಡಿರುವ ಶ್ರೀ ಭಾವಸಾರ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ದಾವಣಗೆರೆ, ದಾವಣಗೆರೆ ಜಿಲ್ಲೆ, ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ಸಂಖ್ಯೆ: ಸನಿ–31/ಸಮಾಪನೆ/ಶ್ರೀ ಭಾ.ಕ್ರೆ.ಕೋ.ಸೊ.ಲಿ/ಸಿಆರ್– /2012–13, ದಿನಾಂಕ: 27–3–2012, ದಿ: 5–4–2012, ದಿ: 6–6–2012 ಮತ್ತು ದಿ: 19–12–2012.
2. ಈ ಕಛೇರಿ ಸಮ ಸಂಖ್ಯೆ : ಕಾರಣ ಕೇಳಿ ತಿಳುವಳಿಕೆ ಪತ್ರ ದಿನಾಂಕ : 11–4–2012.

**ಪ್ರಸ್ತಾವನೆ :**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ಶ್ರೀ ಭಾವಸಾರ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ದಾವಣಗೆರೆ, ದಾವಣಗೆರೆ ಜಿಲ್ಲೆ, ಈ ಸಹಕಾರ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ ಒಂದು ವರ್ಷದಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ. ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತ ಹೊಂದಿರುವುದಿಲ್ಲ. ಈ ಬಗ್ಗೆ ಉಲ್ಲೇಖ (2) ರಲ್ಲಿ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂ. ಡಿಆರ್/ಡಿವಿಜಿ/ಸಮಾಪನೆ/ಸಿಆರ್– /2012–13, ದಿನಾಂಕ : 28–12–2012**

ಪ್ರಸ್ತವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಓ : 139 : ಸಿಎಲ್‌ಎಂ : 2010, ದಿನಾಂಕ: 17–2–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಗುರುಸ್ವಾಮಿ, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಶ್ರೀ ಭಾವಸಾರ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ದಾವಣಗೆರೆ, ದಾವಣಗೆರೆ ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ನೇ ಕಲಂ 73(1)ರನ್ವಯ ಶ್ರೀ ಎ.ಕೆ. ಹನುಮಂತಪ್ಪ, ಮಾರಾಟಾಧಿಕಾರಿ, ನಿಯಮ–441, ಹಾಗೂ ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ದಾವಣಗೆರೆ–ಹರಿಹರ ಅರ್ಬನ್ ಸಹಕಾರ ಬ್ಯಾಂಕ್ ನಿ, ದಾವಣಗೆರೆ. ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74 ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ : 28–12–2012 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಗುರುಸ್ವಾಮಿ**
ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ

**P.R. 109**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ :** ಸಮಾಪನೆಗೊಂಡಿರುವ ಎನ್.ಇ.ಎಸ್. ಮತ್ತು ಟಿ.ಡಿ.ಬಿ. ನೌಕರರ ಸಹಕಾರ ಸಂಘ ನಿ, ದಾವಣಗೆರೆ, ದಾವಣಗೆರೆ–ತಾ: ಜಿಲ್ಲೆ. ಇದರ ನೋಂದಣಿಯನ್ನು ರದ್ದು ಪಡಿಸುವ ಕುರಿತು.

**ಓದಲಾಗಿದೆ :**
1. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ : ಡಿಆರ್/ಡಿವಿಜಿ/ಎಲ್‌ಕ್ಯೂಡಿ/ ಸಿಆರ್–13/2009–10, ದಿನಾಂಕ : 26–9–2011
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ಸಂಖ್ಯೆ: ಸನಿ31/ ಸಮಾಪನೆ/ ಎನ್.ಇ.ಎಸ್.ನೌ.ಸ.ಸಂ.ನಿ./ಸಿಆರ್– /2012–13, ದಿನಾಂಕ : 9–10–2012
3. ಸಮಾಪಕರು, ಎನ್.ಇ.ಎಸ್. ಮತ್ತು ಟಿ.ಡಿ.ಬಿ. ನೌಕರರ ಸಹಕಾರ ಸಂಘ ನಿ, ದಾವಣಗೆರೆ, ಹಾಗೂ ಹಿರಿಯ ಪರಿವೀಕ್ಷಕರು, ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ದಾವಣಗೆರೆ ಇವರ ಪತ್ರ ದಿ: 20–11–2012

**ಪ್ರಸ್ತಾವನೆ :**

ಎನ್.ಇ.ಎಸ್. ಮತ್ತು ಟಿ.ಡಿ.ಬಿ. ನೌಕರರ ಸಹಕಾರ ಸಂಘ ನಿ, ದಾವಣಗೆರೆ, ದಾವಣಗೆರೆ–ತಾ: ಜಿಲ್ಲೆ. ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್‌ಸಿ/864/1966–67, ದಿನಾಂಕ : 7–7–1966 ರಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ, ಇವರು ದಿನಾಂಕ : 26–9–2011ರ ಆದೇಶದಲ್ಲಿ ಸಮಾಪನೆಗೊಳಿಸಿ ಶ್ರೀ ಎನ್.ಜಿ. ರುದ್ರಪ್ಪ, ಸಹಕಾರ ಸಂಘಗಳ ಹಿರಿಯ ಪರಿವೀಕ್ಷಕರು, ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ದಾವಣಗೆರೆ, ಇವರನ್ನು ಸಮಾಪಕರಾಗಿ ನೇಮಿಸಲಾಗಿದೆ. ಸದರಿ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಮಟ್ಟದ್ದಾಗಿರುತ್ತದೆ. ಸಮಾಪಕರು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಅಥಾವೆ ಪತ್ರಿಕೆಯನ್ನು ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮೂಲಕ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂ. ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–13/2009–10, ದಿನಾಂಕ : 10–12–2012**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಓ : 139 : ಸಿಎಲ್‌ಎಂ : 2010, ದಿನಾಂಕ : 17–2–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ

ಉಪನಿಬಂಧಕರು, ಗುರುಸ್ವಾಮಿ, ಆದ ನಾನು ಸಮಾಪನೆಗೊಂಡ ಎನ್.ಇ.ಎಸ್. ಮತ್ತು ಟಿ.ಡಿ.ಬಿ. ನೌಕರರ ಸಹಕಾರ ಸಂಘ ನಿ, ದಾವಣಗೆರೆ, ದಾವಣಗೆರೆ–ತಾ: ಜಿಲ್ಲೆ. ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು, ಹಾಗೂ ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ಈ ಆದೇಶವನ್ನು ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ : 10–12–2012 ರಂದು ಹೊರಡಿಸಿರುತ್ತೇನೆ.

**ಗುರುಸ್ವಾಮಿ**
ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ

P.R. 110

## ಪಟ್ಟಣ ಪಂಚಾಯಿತಿ ಕಾರ್ಯಾಲಯ, ಗುಬ್ಬಿ, ತುಮಕೂರು ಜಿಲ್ಲೆ.

### ಪ್ರಕಟಣೆ

**ಸಂಖ್ಯೆ : ಗು.ಪ.ಪಂ.ಸಿ 1 : ಮಾ.ಹ.ಅ: 48/12–13, ದಿನಾಂಕ : 3–1–2013.**

ಕರ್ನಾಟಕ ಸರ್ಕಾರದ ಸಚಿವಾಲಯದ ಅಧಿಸೂಚನೆ ಸಂಖ್ಯೆ : ಕಂ.ಇ. 32 ವಿ.ಮ.ಕ. 2008, ದಿನಾಂಕ : 30–1–2009 ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2005ರ (Central Act 22 of 2005) ಹಾಗೂ (Public Disclosure Law 2009) ಪ್ರತಿ ಇಲಾಖೆಯ ಸೆಕ್ಷನ್ 4(1) ಡಿ ಹಾಗೂ ಸೆಕ್ಷನ್ 5(1), 5(2) ಮತ್ತು 19(1) ರಲ್ಲಿ ಪದತ್ತವಾದ ಅಧಿಕಾರವನ್ನು ಚಲಾಯಿಸಿ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು ಮಾಹಿತಿ ಕೋರುವ ಅರ್ಜಿಗಳನ್ನು ಅಥವಾ ಮೇಲ್ಮನವಿಗಳನ್ನು ಸ್ವೀಕರಿಸಲು ಕ್ರಮವಾಗಿ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಈ ಕೆಳಕಂಡಂತೆ ನೇಮಿಸಲಾಗಿದೆ.

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಪದನಾಮ | ವಿಳಾಸ ಮತ್ತು ದೂರವಾಣಿ ಸಂಖ್ಯೆ | ಮಾಹಿತಿ ನೀಡುವ ಶಾಖೆ |
|---|---|---|---|
| 1. | ಸಿ. ಯೋಗಾನಂದ, ಕೆ.ಎಂ.ಎ.ಎಸ್.<br>1ನೇ ಮೇಲ್ಮನವಿ ಮತ್ತು ಅಪೀಲು ಅಧಿಕಾರಿ ಹಾಗೂ ಮುಖ್ಯಾಧಿಕಾರಿ | ಪಟ್ಟಣ ಪಂಚಾಯಿತಿ ಗುಬ್ಬಿ<br>08131–222248 | 1ನೇ ಮೇಲ್ಮನವಿ ಅಧಿಕಾರಿ |
| 2. | ಎಂ. ಜಯಣ್ಣ,<br>ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಪ್ರಥಮ ದರ್ಜೆ ಸಹಾಯಕರು | ಪಟ್ಟಣ ಪಂಚಾಯಿತಿ ಗುಬ್ಬಿ<br>08131–222248 | ಆಡಳಿತ ಮತ್ತು ಲೆಕ್ಕಪತ್ರ ಶಾಖೆ, ಎಸ್.ಜೆ.ಎಸ್.ಆರ್.ವೈ. ಶಾಖೆ, ಮತ್ತು ಕಂದಾಯ ಶಾಖೆ |
| 3. | ಎ.ಎಸ್. ಅಂತ್‌ರಾಜ್.<br>ಸಹಾಯಕ ಸಾರ್ವಜನಿಕ ಮಾಹಿತಿ ಹಾಗೂ ಅಧಿಕಾರಿ ಹಾಗೂ ದ್ವಿತೀಯ ದರ್ಜೆ ಸಹಾಯಕರು | | |
| 4. | ಡಿ.ಆರ್. ಪ್ರಕಾಶ್,<br>ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಕಿರಿಯ ಅಭಿಯಂತರರು | ಪಟ್ಟಣ ಪಂಚಾಯಿತಿ ಗುಬ್ಬಿ<br>08131–222248 | ತಾಂತ್ರಿಕ ಹಾಗೂ ಆರೋಗ್ಯ ಶಾಖೆ |
| 5. | ರೈಸ್ ಅಹಮದ್,<br>ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಕಿರಿಯ ಆರೋಗ್ಯ ನಿರೀಕ್ಷಕರು | | |

**ಮುಖ್ಯಾಧಿಕಾರಿ,**
ಪಟ್ಟಣ ಪಂಚಾಯಿತಿ, ಗುಬ್ಬಿ.

P.D. 24

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನಸೌಧ, ಕೊಠಡಿ ಸಂಖ್ಯೆ : 305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ** : ಸ್ಥಗಿತಗೊಂಡಿರುವ ಶ್ರೀ ಚಾಮುಂಡೇಶ್ವರಿ ಹತ್ತಿ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ವೈ.ಎನ್. ಹೊಸಕೋಟೆ ಪಾವಗಡ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ ನೀಡಲಾಗಿದ್ದ ಆದೇಶವನ್ನು ಬದಲಾಯಿಸಿ ಮರು ಆದೇಶ ನೀಡುವ ಬಗ್ಗೆ.

**ಓದಲಾಗಿದೆ :**
1. ಈ ಕಛೇರಿ ಸಮಾಪನಾ ಆದೇಶ ಸಂಖ್ಯೆ : ಡಿಆರ್‌ಟಿ/ಎಲ್‌ಕ್ಯೂಡಿ/ ಸಿಆರ್–02/2010–11, ದಿನಾಂಕ : 30–11–2010.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರ ಸಂಖ್ಯೆ : ಸನಿ 33 : ಎಂ.ಕೆ.ಟಿ : ಸಮಾಪನೆ : 76 : 2012–13, ದಿನಾಂಕ : 25–10–2012.

**ಪ್ರಸ್ತಾವನೆ :**

ಸ್ಥಗಿತಗೊಂಡಿರುವ ಶ್ರೀ ಚಾಮುಂಡೇಶ್ವರಿ ಹತ್ತಿ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ವೈ.ಎನ್. ಹೊಸಕೋಟೆ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ, ಈ ಸಹಕಾರ ಸಂಘವು ಕ್ರಮ ಸಂಖ್ಯೆ: ಸನಿ 33 : ಆರ್‌ಜಿಎನ್/6631/77–78, ದಿನಾಂಕ : 26–6–1978 ಎಂದು ಸಹಾಯಕ

ನಿಬಂಧಕರು ಮಧುಗಿರಿ ಉಪ ವಿಭಾಗ ಮಧುಗಿರಿ ಇವರಿಂದ ನೊಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು 10 ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಈ ಕಾರಣದ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಮಧುಗಿರಿ ಉಪವಿಭಾಗದ ಸಹಾಯಕ ನಿಬಂಧಕರು ದಿನಾಂಕ : 19–8–2010 ರಲ್ಲಿ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಆಡಳಿತ ಮಂಡಳಿ ಅಸ್ತಿತ್ವದಲ್ಲಿಲ್ಲದ ಕಾರಣ ಪತ್ರಿಕಾ ಪ್ರಕಟಣೆ ನೀಡಿ ಸಂಘದ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಾರ್ಯಾಲಯಕ್ಕೆ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ ಸಾರ್ವಜನಿಕರಿಂದಾಗಲೀ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ ಉಲ್ಲೇಖ (3) ರಲ್ಲಿ ನಮೂದಿಸಿದಂತೆ ಸಮಾಪನಾ ಆದೇಶವನ್ನು ಈ ಕಛೇರಿಯಿಂದ ಹೊರಡಿಸಲಾಗಿರುತ್ತದೆ.

ಸದರಿ ಸಮಾಪನಾದೇಶದಲ್ಲಿ ಚಾಮುಂಡೇಶ್ವರಿ ಹತ್ತಿ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಎಂಬುದರ ಬದಲಾಗಿ ಚೌಡೇಶ್ವರಿ ಹತ್ತಿ ಕೈಮಗ್ಗ ನೇಕಾರರ ಸಹಕಾರ ಸಂಘವೆಂದು ಕೈತಪ್ಪಿನಿಂದ ಮುದ್ರಣಗೊಂಡಿರುತ್ತದೆ. ಆದ್ದರಿಂದ ಆದೇಶವನ್ನು ಬದಲಾಯಿಸಿ ಈ ಕೆಳಕಂಡಂತೆ ಮರುಆದೇಶ ನೀಡಲಾಗಿದೆ.

**ಆದೇಶ ಸಂ. ಡಿಆರ್‌ಟಿ/ಎಲ್‌ಕ್ಯೂಡಿ/ಮ/ಆದೇಶ : 2012–13, ದಿನಾಂಕ : 5–11–2012**

ಹೆಚ್. ಬಾಲಶೇಖರ್ ಸಹಕಾರ ಸಂಘಗಳ ಉಪ ನಿಬಂಧಕರು ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ಹಾಗೂ ಕರ್ನಾಟಕ ಅಧಿಸೂಚನೆ ಸಂ. ಸಿಓ/139/ಸಿಎಲ್‌ಎಂ/2010 ದಿನಾಂಕ : 17–2–2011ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸುತ್ತಾ ಶ್ರೀ ಚಾಮುಂಡೇಶ್ವರಿ ಹತ್ತಿ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ವೈ.ಎನ್. ಹೊಸಕೋಟೆ ಪಾವಗಡ ತಾಲ್ಲೂಕು ತುಮಕೂರು ಜಿಲ್ಲೆ ಇದನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಪಾವಗಡ ಇವರನ್ನು ಋಣಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಮರು ಆದೇಶ ಹೊರಡಿಸಿರುತ್ತೇನೆ.

ಋಣ ಸಮಾಪನಾಧಿಕಾರಿಗಳು ಸಂಘದ ಪೂರ್ಣ ಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ ಹಾಗೂ ಸಂಘದ ಲೆಕ್ಕಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ ಜವಾಬ್ದಾರಿ ತಃಖ್ತೆಯ ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ ಅನುಮೋದನೆ ಪಡೆದು ಆದ್ಯತೆಯ ಮೇರೆಗೆ ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ : 5–11–2012 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ತುಮಕೂರು ಜಿಲ್ಲೆ, ತುಮಕೂರು.

P.R. 113

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, 2ನೇ ಮಹಡಿ, ಮಿನಿ ವಿಧಾನಸೌಧ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ :** ಸ್ಥಗಿತಗೊಂಡಿರುವ ಹುಲಿಯೂರುದುರ್ಗ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿ., ಕುಣಿಗಲ್ ತಾಲ್ಲೂಕು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ ಇವರ ಪತ್ರ ಸಂಖ್ಯೆ: ಸನಿ 32: ಸಮಾಪನೆ : 01 : 2012–13, ದಿನಾಂಕ : 29–6–2012.

**ಪ್ರಸ್ತಾವನೆ :**

ಸ್ಥಗಿತಗೊಂಡಿರುವ ಕುಣಿಗಲ್ ತಾಲ್ಲೂಕು ಹುಲಿಯೂರುದುರ್ಗ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿ., ಇದರ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿಯುಳ್ಳದ್ದಾಗಿರುತ್ತದೆ.

ಈ ಸಂಘವು ಸಂಖ್ಯೆ : ಎಆರ್32/ನೋಂದಣಿ/ಆರ್‌ಸಿಎಸ್: ನಂ. 28626/99–2000, ದಿನಾಂಕ: 31–3–2000 ರಲ್ಲಿ ನೋಂದಣಿಯಾಗಿರುತ್ತದೆ.

ಸದರಿ ಸಂಘವು ನೋಂದಣಿಯಾದಾಗಿನಿಂದಲೂ ಯಾವುದೇ ರೀತಿಯ ಕಾರ್ಯಾಚರಣೆ ಪ್ರಾರಂಭಿಸದ ಕಾರಣ ಮತ್ತು ಈ ಸಂಘಕ್ಕೆ ಸಂಬಂಧಿಸಿದಂತೆ ಹುಲಿಯೂರುದುರ್ಗದ ಜಿಲ್ಲಾ ಬ್ಯಾಂಕ್‌ನ ಖಾತೆ ಸಂಖ್ಯೆ : 22ರಲ್ಲಿ ದಿನಾಂಕ : 31–3–2012ಕ್ಕೆ ಇದ್ದಂತೆ ಪ್ರಾರಂಭಿಕ ಠೇವಣಿ 407–00 ಇರುತ್ತದೆಂದು ಹಾಗೂ ಲಭ್ಯ ದಾಖಲಾತಿಗಳ ಪ್ರಕಾರ ಮುಖ್ಯಪ್ರವರ್ತಕರು ಶ್ರೀ ವಿ.ಡಿ. ಪುಟ್ಟಸ್ವಾಮಿ ಬಿನ್ ತಿಮ್ಮೇಗೌಡ, ವಡ್ಡರಾಳು ಆಗಿದ್ದು ಸದರಿ ಸಂಘವು ನಿಷ್ಕ್ರಿಯಗೊಂಡಿರುವುದರಿಂದ ಸಂಘವನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನು ನೇಮಕಾತಿ ಮಾಡಿಕೊಡಬೇಕೆಂದು ತುಮಕೂರು ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋರಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ನೀಡಿದೆ.

**ಆದೇಶ ಸಂ. ಡಿಆರ್‌ಟಿ/ಎಲ್‌ಕ್ಯೂಡಿ/ಸಿಆರ್–70/2011–12, ದಿನಾಂಕ : 9–7–2012**

ಶ್ರೀ ಹೆಚ್. ಬಾಲಶೇಖರ್ ಸಹಕಾರ ಸಂಘಗಳ ಉಪ ನಿಬಂಧಕರು ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ಹಾಗೂ ಸರ್ಕಾರದ ಅಧಿಸೂಚನೆ ಸಂ. ಸಿಓ/139/ಸಿಎಲ್‌ಎಂ/2010 ದಿನಾಂಕ : 17–2–2011ರಲ್ಲಿ

ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕುಣಿಗಲ್ ತಾಲ್ಲೂಕು ಹುಲಿಯೂರುದುರ್ಗ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿ., ತುಮಕೂರು ಜಿಲ್ಲೆ ಇದನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಕುಣಿಗಲ್ ಇವರನ್ನು ಋಣ ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ಋಣ ಸಮಾಪನಾಧಿಕಾರಿಗಳು ಸಂಘದ ಪೂರ್ಣ ಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ ಹಾಗೂ ಸಂಘದ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ 3 ಪ್ರತಿಗಳನ್ನು ಈ ಕಛೇರಿಯ ಅನುಮೋದನೆಗೆ ಸಲ್ಲಿಸಿ ಅನುಮೋದನೆ ಪಡೆದು ಆದ್ಯತಾ ಮೇರೆಗೆ ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ : 9–7–2012 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ತುಮಕೂರು ಜಿಲ್ಲೆ, ತುಮಕೂರು.

P.R. 114

## ನಗರಸಭೆ ಕಾರ್ಯಾಲಯ, ಕಾರವಾರ

### ಅಧಿಸೂಚನೆ

**ನಂ. : ನಸಕಾ : ಮಾ.ಹ.ಅ : ವಿವ : 2012–13, ದಿನಾಂಕ : 2–1–2013**

ಕಾರವಾರ ನಗರಸಭೆಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005ರ ಪ್ರಕರಣ 5(1), 5(2) ಮತ್ತು 19(1)ರ ಮೇರೆಗೆ ಸಾರ್ವಜನಿಕ ಮಾಹಿತಿ ಅಧಿಕಾರಿ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಗಿನಂತೆ ನಿಯುಕ್ತಿಗೊಳಿಸಿದೆ.

| ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಸಾರ್ವಜನಿಕ ಮಾಹಿತಿ ಅಧಿಕಾರಿ | ಪ್ರಥಮ ಮೇಲ್ಮನವಿ ಪ್ರಾಧಿಕಾರಿ |
|---|---|---|
| ಕುಮಾರಿ ರೇಣುಕಾ ವಿ ಮುರ್ಡೇಶ್ವರ ಪ್ರ.ದ. ಸಹಾಯಕಿ ನಗರಸಭೆ ಕಾರವಾರ | ಶ್ರೀಮತಿ ಸುರೇಖಾ ಎಸ್ ಪಾರ್ಸೆಕರ ಪ್ರಭಾರ ವ್ಯವಸ್ಥಾಪಕರು ನಗರಸಭೆ ಕಾರವಾರ | ಡಾ|| ಬಿ. ಉದಯಕುಮಾರ ಶೆಟ್ಟಿ, M.A. M.Phil., PHD, KAS ಪೌರಾಯುಕ್ತರು, ನಗರಸಭೆ, ಕಾರವಾರ |

ಪೌರಾಯುಕ್ತರು,
ನಗರಸಭೆ, ಕಾರವಾರ

P.D. 25

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ನಂ. 143, 1ನೇ ಮಹಡಿ, ಮಲ್ಲೇಶ್ವರಂ ಸಹಕಾರ ಸಂಘಗಳ ಕಟ್ಟಡ, 8ನೇ ಮುಖ್ಯ ರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು.

**ವಿಷಯ :** ಸಮಾಪನೆಗೊಂಡಿರುವ ನಂದಗುಡಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ಹೊಸಕೋಟೆ ತಾಲ್ಲೂಕು ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವ ಬಗ್ಗೆ

**ಓದಲಾಗಿದೆ :**
1. ಕಛೇರಿ ಆದೇಶ ಸಂಖ್ಯೆ : ಡಿಆರ್‌ಬಿ(ಆರ್) ಸಮಾಪನೆ/05/2009–10, ದಿನಾಂಕ : 11–9–2009.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಪತ್ರ ಸಂಖ್ಯೆ: ಸನಿ47/ಸಮಾಪನೆ/3/2012–13, ದಿನಾಂಕ : 1–10–2012.

**ಪ್ರಸ್ತಾವನೆ :**

ಹೊಸಕೋಟೆ ತಾಲ್ಲೂಕಿನ ನಂದಗುಡಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ಅದರ ಬೈಲಾ ಉದ್ದೇಶದ ರೀತ್ಯ ಕಾರ್ಯ ಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದರಿಂದ ಸಂಘದ ಕಾರ್ಯಕಾರಿ ಸಮಿತಿಯವರು ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಲು ಆಸಕ್ತಿ ಇಲ್ಲದೇ ಇರುವುದರಿಂದ ಹಾಗೂ ಈ ಸಂಘದ ಸದಸ್ಯರಿಗಾಗಲಿ ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲವೆಂದು ವರದಿಯಾಗಿದ್ದರಿಂದ ಉಲ್ಲೇಖ (1) ರಲ್ಲಿ ಸೂಚಿಸಿರುವ ದಿನಾಂಕ : 11–9–2009ರ ಆದೇಶದನ್ವಯ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72ರನುಸಾರ ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನಾಗಿ ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸಕೋಟೆ ಇವರನ್ನು ನೇಮಕ ಮಾಡಲಾಗಿತ್ತು. ಸದರಿ ಸಮಾಪನಾಧಿಕಾರಿಗಳು ಈ ಸಂಘದ ಪ್ರಭಾರವಹಿಸಿಕೊಂಡು ಕಾಯ್ದೆ ಕಾನೂನು ಪ್ರಕಾರ ಆಸ್ತಿ ಜವಾಬ್ದಾರಿ ವಿಲೇವಾರಿ ಮಾಡಿ. ಅವುಗಳ ನೋಂದಣಿ ರದ್ದತಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಈ ಸಂಘದ ಸಮಾಪನಾ ಕಾರ್ಯವನ್ನು ಮುಕ್ತಾಯಗೊಳಿಸಿದ್ದರಿಂದ ಈ ಸಂಘದ ನೋಂದಣಿ ರದ್ದು ಮಾಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಇವರು ಉಲ್ಲೇಖ (2)ರ ಪತ್ರದನ್ವಯ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ನೋಂದಣಿ ರದ್ದು ಮಾಡುವುದು ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಗಿನ ಆದೇಶ ಹೊರಡಿಸಿದೆ.

**ಆದೇಶ ಸಂ. ಡಿಆರ್‌ಬಿ(ಆರ್) ಸಮಾಪನೆ/5/2009–10, ದಿನಾಂಕ : 11–10–2012**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75ರನುಸಾರ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿಓ 139 ಸಿಎಲ್‌ಎಂ 2010, ದಿನಾಂಕ : 17–2–2011ರನ್ವಯ ದತ್ತವಾಗಿರುವ ಅಧಿಕಾರದಂತೆ ಆರ್. ಲೋಕೇಶ್ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಈ ಕೆಳಗೆ ಸೂಚಿಸಿರುವ ಸಹಕಾರ ಸಂಘದ ನೋಂದಣಿ ರದ್ದುಗೊಳಿಸಿ ಆದೇಶಿಸಿರುತ್ತೇನೆ.

| ಕ್ರಮ ಸಂಖ್ಯೆ | ನೋಂದಣಿ ರದ್ದುಪಡಿಸಿರುವ ಸಹಕಾರ ಸಂಘದ ಹೆಸರು | ರದ್ದುಪಡಿಸಿದ ನೋಂದಣಿ ಸಂಖ್ಯೆ |
|---|---|---|
| 1 | ನಂದಗುಡಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಸಂಖ್ಯೆ : ಎಆರ್‌ಡಿ 47/ನೋಂದಣಿ ಸಂ/26650/2000–01, ದಿನಾಂಕ : 25–9–2000 |

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ : 11–10–2012 ರಂದು ನೀಡಿರುತ್ತೇನೆ.

**ಆರ್. ಲೋಕೇಶ್**
ಸಹಕಾರ ಸಂಘಗಳ ಉಪ ನಿಬಂಧಕರು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**P.R. 119**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂ: ಸಾಆಇ 25 ವಾತೆಸಿ 2012 ಬೆಂಗಳೂರು, ದಿನಾಂಕ: 16–11–2012**

**ವಿಷಯ:** ವಾಣಿಜ್ಯ ತೆರಿಗೆ ಇಲಾಖೆಯ ವಾಣಿಜ್ಯ ತೆರಿಗೆ ಅಪರ ಆಯುಕ್ತರ ವೃಂದದ ದಿನಾಂಕ 01–01–2010 ರಿಂದ 31–12–2011 ರ ವರೆಗಿನ ಅವಧಿಯ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ ಆಇ 176 ವಾತೆಸಿ 2010, ದಿನಾಂಕ: 03–08–2010.

2) ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ ಸಿಬ್ಬಂದಿ–1/ಜಿಪಿಸಿಆರ್/216/11–12, ದಿನಾಂಕ: 23–02–2012 ಮತ್ತು 06–08–2012.

ವಾಣಿಜ್ಯ ತೆರಿಗೆ ಇಲಾಖೆಯ ವಾಣಿಜ್ಯ ತೆರಿಗೆ ಅಪರ ಆಯುಕ್ತರ ವೃಂದಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1)ರ ದಿನಾಂಕ 03–08–2010ರ ಸರ್ಕಾರದ ಅಧಿಸೂಚನೆ ಸಂಖ್ಯೆ ಆಇ 176 ವಾತೆಸಿ 2010 ರಲ್ಲಿ 22–02–1997 ರಿಂದ 31–12–2009 ರವರೆಗೆ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು.

ಈಗ ದಿನಾಂಕ 01–01–2010 ರಿಂದ 31–12–2011 ರ ವಾಣಿಜ್ಯ ತೆರಿಗೆ ಅಪರ ಆಯುಕ್ತರ ವೃಂದದಲ್ಲಿ ಪ್ರಸ್ತುತ ಇರುವ ಎಲ್ಲಾ ಅಧಿಕಾರಿಗಳನ್ನೊಳಗೊಂಡಂತೆ ದಿನಾಂಕ 31–12–2011 ರಲ್ಲಿದ್ದಂತೆ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಯನ್ನು ತಯಾರಿಸಿ ಅನುಬಂಧ–1 ರಲ್ಲಿ ಲಗತ್ತಿಸಿ ಪ್ರಕಟಿಸಲಾಗಿದೆ. ಬ್ಲಾಕ್ ಅನುಸಾರ ರಿಕ್ತಸ್ಥಾನಗಳ ಹಂಚಿಕೆ ವಿವರಗಳನ್ನು ಅನುಬಂಧ–2 ರಲ್ಲಿ ನೀಡಲಾಗಿದೆ.

ಅನುಬಂಧ–1 ರಲ್ಲಿ ನಿಗಧಿಪಡಿಸಲು ಉದ್ದೇಶಿಸಿರುವ ವಾಣಿಜ್ಯ ತೆರಿಗೆ ಅಪರ ಆಯುಕ್ತರ ಪೂರ್ವಭಾವಿ ಜ್ಯೇಷ್ಠತಾ ಮತ್ತು ಅದಕ್ಕೆ ಸಂಬಂಧಿಸಿದಂತೆ ಇತರೆ ಸೇವಾ ವಿಷಯಗಳ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ ಬಾಧಿತರಾದ ಅಧಿಕಾರಿ/ನೌಕರರು ಆಕ್ಷೇಪಣೆಗಳನ್ನು ಲಿಖಿತ ಮೂಲಕ ಈ ಅಧಿಸೂಚನೆ ಪ್ರಕಟಿಸಲಾದ ದಿನಾಂಕದಿಂದ 30 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, (ಬಿ&ಆರ್) ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು, ಇವರಿಗೆ ಸಲ್ಲಿಸತಕ್ಕದ್ದು, ನಂತರ ಸ್ವೀಕರಿಸಿದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಆರ್. ಚಂದ್ರಶೇಖರಾರಾಧ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಮನ್ವಯ & ವಾ.ತೆ.–2)

**P.R. 4**

## PUBLIC WORKS, PORTS AND INLAND WATER TRANSPORT DEPARTMENT

### NATIONAL HIGHWAYS

**No./SE/AEE/AE/PPP Cell / RFQ Evaluation / 2012-13/922-49/ Dated: 28-12-2012**

**INVITATION FOR QUALIFICATION**

The Authority intends to appoint the Financial Consultant for the Evaluation of RFQ and RFP, addressing bidders' queries: relating to financial / commercial issues and in negotiating the Concession Agreement with the successful bidder. The scope of the Financial Consultants assistance would be limited to financial / commercial legal issues raised by the Concessionaire or Consultants of the Concessionaire through competitive bidding, in accordance with THE procedure set out scope for the work of Two Lanning with paved shoulders Of (1) Chitradurga – Shimoga Section Of NH 13 From Km 422.00 To 528.300 and (2) Kerala Border-Kollegal Section of NH-212 from Km 117.60 to Km 268.40 Under NHDP-IVA In The State of Karnataka To Be Executed on Design Build Finance Operate And Transfer Basis (Public Private Partnership) The bid documents are available on website http://kpwd.gov.in and http://eproc.karnataka.gov.in under login for bidders from 31-12-2012 to 17-01-2013.

Last date, time of submission : 17-01-2013 up to 1100 hrs

Opening of Applications : 18-01-2013 at 1130 hrs.

The Completed bid documents can be submitted at http://eproc.karnataka.gov.in

The authorized signatory holding Power of Attorney shall only be the Digital Signatory. In case authorized signatory holding Power of Attorney and Digital Signatory are not the same, the bid shall be considered non-responsive.

Amendments/Corrigendum, if any, would be hoisted on the http://morth.nic.in/ http://kpwd.gov.in and http://eproc.karnataka.gov.in

Address for Communication/clarification :

| | |
|---|---|
| DESIGNATION : | Superintending Engineer (PPP Cell) |
| ADDRESS : | Office of the Chief Engineer, National Highways, II Floor, PWD Annex Building, K.R. Circle, BANGALORE, Karnataka State |
| PHONE NO: | 080-22276601 |
| FAX NO: | 080-22276605 |
| E-MAIL ADDRESS: | sepppbng@yahoo.in |

Superintending Engineer, (PPP Cell)
National Highways, Bangalore

**P.R. 1**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪವಿಭಾಗ-1, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ

### ಅಧಿಸೂಚನೆ

### ಸಂಖ್ಯೆ: ಡಬ್ಲ್ಯೂಸಿಎ/ಸಿಆರ್-39/2012ಎಫ್. ದಿನಾಂಕ: 24-12-2012

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಪುಷ್ಪ, ಕೋ ದಿ: ಗೋಪಾಲ ಅಂಚನ್
2. ಕುಮಾರಿ ಅಮಿಶ, ಬಿನ್ ದಿ. ಗೋಪಾಲ ಅಂಚನ್
3. ಮಾಸ್ಟರ್ ಅಕ್ಷಯ್ ಕುಮಾರ್, ಬಿನ್ ದಿ: ಗೋಪಾಲ ಅಂಚನ್ ಡೋ ನಂ: 6 88ಬಿ, ಪಿಜತಾಡಿ ಹೌಸ್, ಮೂಡು ಕೋಣಾಜೆ ಗ್ರಾಮ, ಪಡು ಕೋಣಾಜೆ ಅಂಚೆ, ಮಂಗಳೂರು

ಪ್ರತಿವಾದಿಗಳು:

1. ಶ್ರೀ ನಾರಾಯಣ ಪಿ.ಎಂ. ಬಿನ್ ಸುಬ್ಬ ಪೂಜಾರಿ, ಮೆ: ನಿಶ್ಮಿತಾ ಮೋಟಾರ್ಸ್, ಮೂಡಬಿದ್ರಿ, ಮಂಗಳೂರು
2. ನ್ಯಾಶನಲ್ ಇನ್ಸೂರೆನ್ಸ್ ಕಂ. ಲಿ., ಬ್ರ್ಯಾಂಚ್ ಆಫೀಸ್, 1ನೇ ಮಹಡಿ, ನಿತ್ಯಾನಂದ ಕಾಂಪ್ಲೆಕ್ಸ್, ಮೈನ್‌ರೋಡ್, ಮೂಡಬಿದ್ರಿ ಮಂಗಳೂರು.

ಅರ್ಜಿದಾರಳಾದ/ಶ್ರೀಮತಿ ಪುಷ್ಪ ಇವರು ತಮ್ಮ ಗಂಡನಾದ ದಿವಂಗತ ಶ್ರೀ ಗೋಪಾಲ ಅಂಚನ್ @ ಗೋಪಾಲ ಪೂಜಾರಿ, (ಚಾಲಕ) ಇವರು ಪ್ರತಿವಾದಿಗಳಾದ, ಶ್ರೀ ನಾರಾಯಣ ಪಿ.ಎಂ. ಬಿನ್ ಸುಬ್ಬ ಪೂಜಾರಿ, ಮೆ: ನಿಶ್ಮಿತಾ ಮೋಟಾರ್ಸ್, ಮೂಡಬಿದ್ರಿ, ಮಂಗಳೂರು ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 08-11-2012 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಮಹೇಶ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ ಉಪ ವಿಭಾಗ-1, ಮಂಗಳೂರು

**P.R. 2**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪವಿಭಾಗ–1, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**

**ಅಧಿಸೂಚನೆ**

**ಸಂಖ್ಯೆ: ಡಬ್ಲ್ಯೂಸಿಎ/ಸಿಆರ್–40/2012ಎಫ್. ದಿನಾಂಕ: 24–12–2012**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು**

1. ಶ್ರೀ ರಾಕೇಶ್. ಯು, ಬಿನ್ ಶೇಖರ
2. ಕುಮಾರಿ ದೀಪಿಕಾ. ಎಸ್. ಬಿನ್ ಶೇಖರ 2/154, ದೀಪಿಕಾ ನಿಲಯ, ಮಾಡೂರು ಸೈಟ್, ಬೀರಿ, ಅಂಚೆ ಕೋಟೆಕಾರ್, ಮಂಗಳೂರು

1. ಶ್ರೀ ಎಂ. ಮಾಣಿಕ್ಯ ರಾಜ್ ಆಳ್ವ, ಬಿನ್ ರವಿರಾಜ್ ಆಳ್ವ 'ಶ್ರೀ ಪದ್ಮಾವತಿ' ವಯ ಮೂಡಬಿದ್ರಿ, ಶಿರ್ತಾಡಿ, ದ.ಕ. ಜಿಲ್ಲೆ.
2. ದಿ: ಬ್ರ್ಯಾಂಚ್ ಮ್ಯಾನೇಜರ್, ರಿಲಯನ್ಸ್ ಜನರಲ್ ಇನ್ಸೂರೆನ್ಸ್ ಕಂ.ಲಿ., ಮ್ಯಾಕ್ಸಿಮಸ್ ಕಮರ್ಷಿಯಲ್ ಕಾಂಪ್ಲೆಕ್ಸ್, 4ನೇ ಮಹಡಿ, ಎಲ್.ಹೆಚ್.ಹಿಲ್ ರೋಡ್, ಮಂಗಳೂರು–1

ಅರ್ಜಿದಾರನಾದ ಶ್ರೀ ರಾಕೇಶ್, ಯು, ಇವರು ತಮ್ಮ ಅಣ್ಣನಾದ ದಿವಂಗತ ಪುನಿತ್ ಇವರು 1ನೇ ಪ್ರತಿವಾದಿಗಳಾದ ಶ್ರೀ ಎಂ. ಮಾಣಿಕ್ಯ ರಾಜ್ ಆಳ್ವ, ಬಿನ್ ರವಿರಾಜ್ ಆಳ್ವ 'ಶ್ರೀ ಪದ್ಮಾವತಿ' ವಯ ಮೂಡಬಿದ್ರಿ, ಶಿರ್ತಾಡಿ, ದ.ಕ. ಜಿಲ್ಲೆ ಇದರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 08–03–2012 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಅಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಮಹೇಶ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ ಉಪ ವಿಭಾಗ–1, ಮಂಗಳೂರು

**P.R. 3**

## IN THE COURT OF COMMISSIONER FOR WORKMEN'S COMPENSATION BIDAR

**PROCLAMATION**

**No. LOB/WCA/Cr-05/2013, Dated : 10-01-2013**

**Applicants :** **V/s** **Respondents :**

Smt. Shirkanta w/o Raju @ Rajkumar
Age : 30 years,
Occu :Household
R/o Mannoekhelli Tq. Humnabad
Dist. Bidar & two others

1. Mohammed Mehraj s/o Mohammed Pashamiyar
   Occu : Business
   R/o Mannaoekhelli Tq. Humnabad.
2. The Authorised Officer,
   Future Gen-India Insurance Co. Ltd.
   2nd Floor, Kalburgi Mark, opposite
   I.B. Girls High School Deshpande Nagar
   Hubli-580 009

Smt. Shirkanta w/o Raju @ Rajkumar R/o Mannoekhelli Tq. Humnabad have/has filed application in this court claiming compensation stating that late : Raju @ Rajkumar was working as Driver Under the Respondet No. .......... he met with an accident arising out of and during the course of employment as a result he died on 07-06-2012.

Wherefore, it is hereby notified for the information of these concerned that other dependents if any may file their claim application and objections with 30 days from the date of publication of this proclaimation, if no applications on objections are received within the specified date the court will proceeded further in the matter.

COMMISSIONER FOR WORKMEN'S
COMPENSATION, BIDAR.

**P.R. 92**

## ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು

**ವಿಷಯ :** ಶ್ರೀ ಮಹಾದೇವಪ್ಪ, ಕಿರಿಯ ಆರೋಗ್ಯ ಸಹಾಯಕರು, (ಪುರುಷ) ಪ್ರಾಥಮಿಕ ಆರೋಗ್ಯ ಕೇಂದ್ರ, ಜೇರಟಗಿ, ಜೇವರ್ಗಿ ತಾಲ್ಲೂಕು ಗುಲ್ಬರ್ಗಾ ಜಿಲ್ಲೆ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತುಕ್ರಮ–ಅಂತಿಮ ಆದೇಶ.

**ಓದಲಾಗಿದೆ :**

1. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಗುಲ್ಬರ್ಗಾ ಇವರ ಪತ್ರ ಸಂ. ಸಿ–2 ಸಿ.ಆರ್/353/2009–10 ದಿನಾಂಕ : 31–08–2010.
2. ವೈದ್ಯಾಧಿಕಾರಿಗಳು ಪ್ರಾಥಮಿಕ ಆರೋಗ್ಯ ಕೇಂದ್ರ, ಜೇರಟಗಿ ಇವರ ಪತ್ರ ಸಂಖ್ಯೆ : ಪ್ರಾ.ಆ.ಕೇ.ಜೇ/ 83–09–10. ದಿನಾಂಕ : 23/12/2009.
3. ವೈದ್ಯಾಧಿಕಾರಿಗಳು ಪ್ರಾಥಮಿಕ ಆರೋಗ್ಯ ಕೇಂದ್ರ, ಜೇರಟಗಿ ಇವರ ಪತ್ರ ಸಂಖ್ಯೆ : ಪ್ರಾ.ಆ.ಕೇ.ಜೇ/95/09–10, ದಿನಾಂಕ : 25/01/2010.
4. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಗುಲ್ಬರ್ಗಾ ಇವರ ಪತ್ರ ಸಂಖ್ಯೆ : ಸಂ. ಸಿಬ್ಬಂದಿ–2ಸಿ.ಆರ್/353/2009–10. ದಿನಾಂಕ : 26–06–2010ರ ಪತ್ರಿಕಾ ಪ್ರಕಟಣೆ ದಿನಾಂಕ : 06–07–2010
5. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಗುಲ್ಬರ್ಗಾ ಇವರ ಪತ್ರ ಸಂ. ಸಿಬ್ಬಂದಿ–2ಸಿ.ಆರ್/353/2009–10, ದಿನಾಂಕ : 30–06–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಗುಲ್ಬರ್ಗಾರವರು ಶ್ರೀ ಮಹಾದೇವಪ್ಪ ಕಿರಿಯ ಆರೋಗ್ಯ ಸಹಾಯಕರು. (ಪುರುಷ) ಪ್ರಾಥಮಿಕ ಆರೋಗ್ಯ ಕೇಂದ್ರ, ಜೇರಟಗಿ ಜೇವರ್ಗಿ ತಾಲ್ಲೂಕು ಗುಲ್ಬರ್ಗಾ ಜಿಲ್ಲೆ ಇವರು ದಿನಾಂಕ : 01–11–2009 ರಿಂದ ಇಂದಿನವರೆಗೆ ಯಾವುದೇ ರಜೆಯನ್ನು ಮಂಜೂರಾತಿ ಪಡೆಯದೇ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾಗಿರುವುದರಿಂದ ಅವರ ಸೇವಾ ಪುಸ್ತಕದಲ್ಲಿರುವಂತೆ ಖಾಯಂ ವಿಳಾಸಕ್ಕೆ ಕರ್ತವ್ಯಕ್ಕೆ ಪುನಃ ಹಾಜರಾಗಲು ಮೂರು ಕರೆಯೋಲೆ ನೋಟೀಸ್‌ಗಳನ್ನು ಕಳುಹಿಸಿರುವುದಾಗಿ ಅಲ್ಲಿನ ವೈದ್ಯಾಧಿಕಾರಿಗಳು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಗುಲ್ಬರ್ಗಾ ಇಲ್ಲಿಗೆ ವರದಿ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ತದ ನಂತರ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಗುಲ್ಬರ್ಗಾರವರು ನೋಟೀಸ್ ಸಂಖ್ಯೆ : ಸಿ–2/ಸಿಆರ್/353/09–10. ದಿನಾಂಕ : 22–01–2010ರಲ್ಲಿಯೂ ಸದರಿ ಸಿಬ್ಬಂದಿಯವರಿಗೆ ನೋಟಿಸ್ ಕಳುಹಿಸಿ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಲಾಗಿದ್ದಾಗ್ಯೂ ಸಹ ಅವರು ಕರ್ತವ್ಯಕ್ಕೆ ಹಾಜರಾಗದೇ ಇರುವ ಪ್ರಯುಕ್ತ ಪತ್ರಿಕಾ ಪ್ರಕಟಣೆ ನೀಡಿ ಪತ್ರಿಕೆಯಲ್ಲಿ ಪ್ರಕಟಗೊಂಡ 7 (ಏಳು) ದಿನಗಳಲ್ಲಿ ಕರ್ತವ್ಯಕ್ಕೆ ಮರು ಹಾಜರಾಗಲು ಸೂಚಿಸಲಾಗಿತ್ತು. ಸದರಿ ನೌಕರರು ಈ ಪತ್ರಿಕಾ ಪ್ರಕಟಣೆಗೂ ಸಹ ಸ್ಪಂದಿಸದೇ. ಹಾಗೂ ಅವರಿಂದ ಯಾವುದೇ ಪ್ರತಿಕ್ರಿಯೆ ಕಛೇರಿಗೆ ಸ್ವೀಕೃತವಾಗಿರುವುದಿಲ್ಲದ ಕಾರಣ ಅವರು ಕರ್ತವ್ಯದಲ್ಲಿ ಮುಂದುವರೆಯಲು ಆಸಕ್ತಿ ಇಲ್ಲದಿರುವುದು ಕಂಡುಬರುತ್ತದೆ ಎಂಬುದಾಗಿ ತಮ್ಮ ವರದಿಯಲ್ಲಿ ತಿಳಿಸಿ. ಇದುವರೆವಿಗೂ ಈ ಬಗ್ಗೆ ತೆಗೆದುಕೊಂಡ ಪೂರ್ವಭಾವಿ ಕ್ರಮ ಉಲ್ಲೇಖಿತ ದಾಖಲಾತಿಗಳೊಂದಿಗೆ ವರದಿ ಸಲ್ಲಿಸಿರುತ್ತಾರೆ. ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ ನೌಕರರ ಖಾಯಂ ಪೂರ್ವ ಸೇವಾವಧಿ ಘೋಷಣೆಯಾಗಿಲ್ಲದಿರುವ ಬಗ್ಗೆ ಮಾಹಿತಿಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್ (16) ಸಿಆರ್–06/2010–11, ದಿನಾಂಕ : 21–09–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅಂಜುಮ್ ಪರ್ವೇಜ್, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀ ಮಹಾದೇವಪ್ಪ, ಕಿರಿಯ ಆರೋಗ್ಯ ಸಹಾಯಕರು, (ಪುರುಷ) ಪ್ರಾಥಮಿಕ ಆರೋಗ್ರ ಕೇಂದ್ಯ, ಜೇರಟಗಿ, ಜೇವರ್ಗಿ ತಾಲ್ಲೂಕು ಗುಲ್ಬರ್ಗಾ ಜಿಲ್ಲೆ ಇವರ ಅನಧಿಕೃತ ಗೈರು ಹಾಜರಿಯ ಆರೋಪವನ್ನು ಗಂಭೀರವಾಗಿ ಪರಿಗಣಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನ್) ನಿಯಮಗಳ 1977ರ ನಿಯಮ 6 (1) (ಬಿ) ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದ್ದೇನೆ.

**ಆಯುಕ್ತರು,**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು–9

**ಪಿ.ಆರ್. 85**

## IN THE COURT OF COMMISSIONER FOR WORKMEN'S COMPENSATION BIDAR

### PROCLAMATION

**No. LOB/WCA/Cr-No.04/2012, Dated : 05-01-2013**

**Applicants :**

1. Sharnppa s/o Ramanna Kamble
   Age : 45 years
   Occu : Labour
2. U/U of Claimnat No. 1 Bath R/o Naubad Tq. Dist. Bidar and one another

**V/s**

**Respondents :**

1. Smt. Chandrakala w/o Dilipkumar
   Aged : Major
   Occu: Household R/o H. No. 173/8
   Muniyar Talim Deshapande Galli Bidar New at Gondalge House Hiremath Colony Basavakalyan Dist. Bidar.
2. The Manager of Sriram Gen Engg.-in & Co. Ltd. R/o 10003 E-B RIICO Industrial area Sitapur, Jaipur , Rajasthan-302022

Sri Sharnappa s/o Ramanna f/o Sachin s/o Sharnappa kamble R/o Naubad Tq. & Dist. Bidar, have/has filed application in this court claiming compensation stating that late : Sachin was working as Cleaner Under the Respondet No 01 he met with an accident arising out of and during the course of employment as a result he died on 27-12-2012.

Wherefore, it is hereby notified for the information of these concerned that other dependents if any may file their claim application and objections with 30 days from the date of publication of this proclaimation, if no applications on objections are received within the specified date the court will proceeded further in the matter.

COMMISSIONER FOR WORKMEN'S
COMPENSATION, BIDAR.

**P.R. 87**

## ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು

**ವಿಷಯ :** ಶ್ರೀಮತಿ ಆಯೇಷಾಸಿದ್ಧಿಕ್, ಶ್ರೀಮತಿ ಎ.ಸುಗ್ಗಿ ಮತ್ತು ಶ್ರೀಮತಿ ಕೆ. ವಿ. ವೆಂಕಟಲಕ್ಷ್ಮಮ್ಮ, ಶುಶ್ರೂಷಕರು, ಇವರ ಅನಧಿಕೃತ ಗೈರುಹಾಜರಿ ಆರೋಪಕ್ಕೆ ಶಿಸ್ತುಕ್ರಮ–ಅಂತಿಮ ಆದೇಶ.

**ಓದಲಾಗಿದೆ :**
1. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ. ಇವರ ದೋಷಾರೋಪಣಾ ಹಾಗೂ ತಿಳುವಳಿಕೆ ಪತ್ರ ಸಂಖ್ಯೆ: ಸಿ(2)/115,116,117/2008–09 ದಿನಾಂಕ : 02–03–2009.
2. ನೌಕರರ ಲಿಖಿತ ಅಹವಾಲು ದಿನಾಂಕ ಇಲ್ಲ.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ : ಸಿ(2)/115,2008–09, ದಿನಾಂಕ : 26/08/2009.
4. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಸಂಖ್ಯೆ : ಸಿ(2)/115,2008–09, ದಿನಾಂಕ : 08/12/2009.
5. ಕರ್ತವ್ಯಕ್ಕೆ ಮರುಹಾಜರಾಗಲು ನಿರ್ದೇಶನಾಲಯದಿಂದ ಹೊರಡಿಸಿದ ಪತ್ರಿಕಾ ಪ್ರಕಟಣೆ ಸಮ ಸಂಖ್ಯೆ ದಿನಾಂಕ : 21–07–2009.
6. ನೌಕರರ ಲಿಖಿತ ಅಹವಾಲು ದಿನಾಂಕ: 15–02–2012.

**ಪ್ರಸ್ತಾವನೆ :**

ಶ್ರೀಮತಿ ಆಯೇಷಾಸಿದ್ದಿಕ್, ಶುಶ್ರೂಷಕಿ, ತಾಲ್ಲೂಕು ಆಸ್ಪತ್ರೆ ನೆಲಮಂಗಲ, ಶ್ರೀಮತಿ ಎ. ಸುಗ್ಗಿ ಶುಶ್ರೂಷಕಿ, ಪ್ರಾಥಮಿಕ ಆರೋಗ್ಯ ಕೇಂದ್ರ ಕುಂದಾಣ ದೇವನಹಳ್ಳಿ ತಾಲ್ಲೂಕು, ಮತ್ತು ಶ್ರೀಮತಿ ಕೆ. ವಿ. ವೆಂಕಟಲಕ್ಷ್ಮಮ್ಮ, ಶುಶ್ರೂಷಕಿ, ಪ್ರಾಥಮಿಕ ಆರೋಗ್ಯ ಕೇಂದ್ರ ತೊಬಗೆರೆ ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕ್ರಮಾಂಕವಾಗಿ ದಿನಾಂಕ : 16–04–2007, 06–09–2005 ಮತ್ತು 20–11–2005 ರಿಂದ ಇಲ್ಲಿಯವರೆಗಿನ ಅನಧಿಕೃತ ಗೈರುಹಾಜರಿ ಆರೋಪದ ಬಗ್ಗೆ ಮೇಲೆ ಓದಲಾದ (1)ರಲ್ಲಿ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿತ್ತು, ಅದಕ್ಕೆ ಉತ್ತರವಾಗಿ ನೌಕರರು ಮೇಲೆ ಓದಲಾದ (2)ರ ಪ್ರಕಾರ ಲಿಖಿತ ಹೇಳಿಕೆ ಸಲ್ಲಿಸಿರುತ್ತಾರೆ. ನೌಕರರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿ ಅದು ಸಮರ್ಪಕವಾಗಿಲ್ಲದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಇಲಾಖಾ ವಿಚಾರಣೆ ನಡೆಸಿ ವರದಿಯನ್ನು ನೀಡಲು ಮೇಲೆ ಓದಲಾದ (3)ರ ಆದೇಶದಲ್ಲಿ ವಿಚಾರಣಾ ಅಧಿಕಾರಿಯವರನ್ನು ನೇಮಕ ಮಾಡಲಾಗಿತ್ತು. ಮೇಲೆ ಓದಲಾದ (4)ರಲ್ಲಿ ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ (5)ರಲ್ಲಿ ಸದರಿ ನೌಕರರುಗಳಿಗೆ ಕರ್ತವ್ಯಕ್ಕೆ ಮರುಹಾಜರಾಗುವಂತೆ ಸೂಚಿಸಿ ಪತ್ರಿಕಾ ಪ್ರಕಟಣೆಯನ್ನು ಹೊರಡಿಸಲಾಗಿತ್ತು. ಆದರೆ ಸದರಿ ನೌಕರರುಗಳು ಕರ್ತವ್ಯಕ್ಕೆ ಮರುಹಾಜರಾಗಿರುವುದಿಲ್ಲವಾದ ಕಾರಣ. ಸಿಸಿಎ ನಿಯಮಾವಳಿಗಳು 1957ರ ನಿಯಮ 8(ii)ರಿಂದ 8(viii) ವರೆಗಿನ ದಂಡನೆಯನ್ನು ವಿಧಿಸುವ ಸಕ್ಷಮ ಶಿಸ್ತು ಪ್ರಾಧಿಕಾರಿಯಾಗಿರುವುದರಿಂದ ವಿಚಾರಣಾ ಪ್ರಾಧಿಕಾರಿಗಳು ನೀಡಿರುವ ವರದಿಯಲ್ಲಿ ಆರೋಪವು ಸಾಬೀತಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್ (1) ಸಿಆರ್–44/2008–09, ದಿನಾಂಕ : 29–11–2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ. ಬಿ. ಪಾಟೀಲ್, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು

1) ಶ್ರೀಮತಿ ಆಯೇಷಾಸಿದ್ದಿಕ್, ಶುಶ್ರೂಷಕಿ, ತಾಲ್ಲೂಕು ಆಸ್ಪತ್ರೆ ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

2) ಶ್ರೀಮತಿ ಎ. ಸುಗ್ಗಿ ಶುಶ್ರೂಷಕಿ, ಪ್ರಾಥಮಿಕ ಆರೋಗ್ಯ ಕೇಂದ್ರ ಕುಂದಾಣ ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ.

3) ಶ್ರೀಮತಿ ಕೆ. ವಿ. ವೆಂಕಟಲಕ್ಷ್ಮಮ್ಮ, ಶುಶ್ರೂಷಕಿ, ಪ್ರಾಥಮಿಕ ಆರೋಗ್ಯ ಕೇಂದ್ರ ತೊಬಗೆರೆ ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

ಇವರ ದೀರ್ಘ ಕಾಲದ ಅನಧಿಕೃತ ಗೈರು ಹಾಜರಿ ಆರೋಪವನ್ನು ಗಂಭೀರವಾಗಿ ಪರಿಗಣಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ರೀತ್ಯಾ ಹಾಗೂ ಸರ್ಕಾರಿ ಸೇವೆಗೆ ಪುನಃ ನೇಮಕಾತಿ ಹೊಂದಲು ಅನರ್ಹನಾಗುವ ರೀತಿ ನಿಯಮ 8(viii) ಮೇರೆಗೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿರುತ್ತೇನೆ.

**ಆಯುಕ್ತರು,**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು–9

**P.R. 95**

## ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು

**ವಿಷಯ :** ಶ್ರೀಮತಿ ಸುಬ್ಬಲಕ್ಷ್ಮಮ್ಮ ಗ್ರೂಪ್ 'ಡಿ' ಪ್ರಾ.ಆ, ಕೇಂದ್ರ ಬೈಲನರಸಾಪುರ ಹೊಸಕೋಟೆ ತಾಲ್ಲೂಕು ಬೆಂಗಳೂರು ಗ್ರಾಮಾಂತರ ಜಿಲ್ಲೆ. ಇವರು ಸರ್ಕಾರಕ್ಕೆ ಸುಳ್ಳು ದಾಖಲೆ ನೀಡಿ ನೇಮಕಾತಿ ಪಡೆದ ಆರೋಪದ ಬಗ್ಗೆ. ಶಿಸ್ತು ಕ್ರಮ–ಅಂತಿಮ ಆದೇಶ.

**ಓದಲಾಗಿದೆ :**

1. ಅಧೀಕ್ಷಕರು ವಿಕ್ಟೋರಿಯಾ ಆಸ್ಪತ್ರೆ ಬೆಂಗಳೂರು ಇವರ ಪತ್ರ ಸಂಖ್ಯೆ : ಸಿ(3) 203/90–91. ದಿನಾಂಕ : 16–01–2002.
2. ನಿರ್ದೇಶನಾಲಯದ ಅಧಿಕೃತ ಜ್ಞಾಪನಾಪತ್ರ ಸಿಜಿಎ(1)34/2002–03, ದಿನಾಂಕ : 27/09/2002.
3. ಸರ್ಕಾರದ ಪತ್ರ ಆಕುಕ 226 ಎಂಎಸ್ಎಸ್ 2003 ದಿನಾಂಕ : 26/03/2002. (ದೂರಿನ ಬಗ್ಗೆ ವಿಚಾರಣೆ).
4. ನಿರ್ದೇಶನಾಲಯದ ಸಮ ಸಂಖ್ಯೆಯ ಆದೇಶ ದಿನಾಂಕ : 06/07/2005. (ನೇಮಕಾತಿಯನ್ನು ರದ್ದು ಪಡಿಸಿ ಸೇವೆಯಿಂದ ಬಿಡುಗಡೆ ಮಾಡಲು ಆದೇಶ).
5. ಅಧೀಕ್ಷಕರು ಸಾರ್ವಜನಿಕ ಆಸ್ಪತ್ರೆ ಜಯನಗರ ಇವರ ಪತ್ರ ಸಂಖ್ಯೆ: ಸಾಆಜ/ಸಿ(3) 5/2005–06 ದಿನಾಂಕ : 30–07–2005 (ಕರ್ತವ್ಯದಿಂದ ಬಿಡುಗಡೆ).
6. ಕರ್ನಾಟಕ ಆಡಳಿತ ನ್ಯಾಯಮಂಡಳಿ ಅರ್ಜಿ ಸಂಖ್ಯೆ : 7389/2005ರ ಆದೇಶ ದಿನಾಂಕ : 06–11–2006.
7. ನಿರ್ದೇಶನಾಲಯದ ಸಮ ಸಂಖ್ಯೆಯ ಆದೇಶ ದಿನಾಂಕ : 23–03–2007 (ಕೆ.ಎ.ಟಿ. ಆದೇಶದಂತೆ ಕರ್ತವ್ಯಕ್ಕೆ ಹಾಜರಾಗಲು ಅನುಮತಿ).
8. ನಿರ್ದೇಶನಾಲಯದ ಸಮ ಸಂಖ್ಯೆ ಪತ್ರ ದಿನಾಂಕ : 17/08/2011 (ದೋಷಾರೋಪಣಾ ಪಟ್ಟಿ)
9. ನೌಕರರ ರಕ್ಷಣಾ ಹೇಳಿಕೆ ದಿನಾಂಕ : 02–09–2011.
10. ನಿರ್ದೇಶನಾಲಯದ ಸಮ ಸಂಖ್ಯೆ ಪತ್ರ ದಿನಾಂಕ : 05–11–2011 (ವಿಚಾರಣಾಧಿಕಾರಿಗಳ ನೇಮಕ).
11. ಮುಖ್ಯ ಜಾಗೃತಾಧಿಕಾರಿಗಳು ಜಾಗೃತ ಕೋಶ ಆಕುಕ ನಿರ್ದೇಶನಾಲಯ ಬೆಂಗಳೂರು ಇವರ ಪತ್ರ ಸಂಖ್ಯೆ: ಮುಜಾಅ/ಜಾಕೋ/ಎನ್‌ಜಿ/12/11–12 ದಿನಾಂಕ : 12–06–2012 (ವಿಚಾರಣಾ ವರದಿ)
12. ಎರಡನೇ ಸೂಚನಾ ಪತ್ರ ದಿನಾಂಕ : 18–07–2012
13. ಎರಡನೇ ಸೂಚನಾ ಪತ್ರಕ್ಕೆ ರಕ್ಷಣಾ ಹೇಳಿಕೆ ದಿನಾಂಕ 03–08–2012.

**ಪ್ರಸ್ತಾವನೆ :**

ಶ್ರೀಮತಿ ಸುಬ್ಬಲಕ್ಷ್ಮಮ್ಮ ಗ್ರೂಪ್ 'ಡಿ' ಪ್ರಾ.ಆ, ಕೇಂದ್ರ ಬೈಲನರಸಾಪುರ ಹೊಸಕೋಟೆ ತಾಲ್ಲೂಕು ಬೆಂಗಳೂರು ಗ್ರಾಮಾಂತರ ಜಿಲ್ಲೆ ಆದ ಇವರು ಸರ್ಕಾರಕ್ಕೆ ಸುಳ್ಳು ದಾಖಲೆ ನೀಡಿ ನೇಮಕಾತಿ ಪಡೆದ ಆರೋಪಕ್ಕೆ ಮೇಲೆ ಓದಲಾದ (1)ರಲ್ಲಿ ಶ್ರೀಮತಿ ಓಬಳಮ್ಮ ನೈರ್ಮಲ್ಯ ಸೇವಕಿ ವಿಕ್ಟೋರಿಯಾ ಆಸ್ಪತ್ರೆ ಬೆಂಗಳೂರು ಇವರ ಅವಿವಾಹಿತ ಮಗಳಾದ ಶ್ರೀಮತಿ ಸುಬ್ಬಲಕ್ಷ್ಮಮ್ಮ ಇವರಿಗೆ ಅನುಕಂಪದ ಆಧಾರದ ಮೇಲೆ ಗ್ರೂಪ್ 'ಡಿ' ಹುದ್ದೆಗೆ ನೇಮಕಾತಿ ಮಾಡುವಂತೆ ಪ್ರಸ್ತಾವನೆ ಕಳುಹಿಸಿದ್ದನ್ನು ಪರಿಶೀಲಿಸಿ ಮೇಲೆ ಓದಲಾದ (2)ರಲ್ಲಿ ನೌಕರರನ್ನು ಅನುಕಂಪದ ಆಧಾರದ ಮೇಲೆ ಸಾರ್ವಜನಿಕ ಆಸ್ಪತ್ರೆ ಜಯನಗರ ಇಲ್ಲಿ ಗ್ರೂಪ್ 'ಡಿ' ಹುದ್ದೆಗೆ ನೇಮಕಾತಿ ಮಾಡಲಾಗಿತ್ತು, ಮೇಲೆ ಓದಲಾದ (3)ರಲ್ಲಿನ ಸರ್ಕಾರದ ಪತ್ರದಲ್ಲಿ ನೌಕರರು ಸುಳ್ಳು ದಾಖಲಾತಿ ನೀಡಿ ನೇಮಕಾತಿ ಹೊಂದಿರುವುದಾಗಿ ದೂರು ಬಂದ ಪ್ರತಿಯನ್ನು ಲಗತ್ತಿಸಿ ಈ ಬಗ್ಗೆ ಪರಿಶೀಲಿಸಲು ಸೂಚಿಸಿದ ಪ್ರಕಾರ ಮೇಲೆ ಓದಲಾದ (4)ರ ಲ್ಲಿ ನೇಮಕಾತಿ ಆದೇಶ ರದ್ದುಪಡಿಸಿ ಕರ್ತವ್ಯದಿಂದ ಬಿಡುಗಡೆ ಮಾಡಲು ಆದೇಶ ಹೊರಡಿಸಿದೆ. ಮೇಲೆ ಓದಲಾದ (5)ರಲ್ಲಿ ನೌಕರರನ್ನು ಕರ್ತವ್ಯದಿಂದ ಬಿಡುಗಡೆ ಮಾಡಿರುತ್ತಾರೆ, ಮೇಲೆ ಓದಲಾದ (6)ರ ಆದೇಶದಂತೆ ನೌಕರರನ್ನು ಮೇಲೆ ಓದಲಾದ (7)ರಲ್ಲಿನ ಪ್ರಕಾರ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಲಾಗಿದೆ. ಮೇಲೆ ಓದಲಾದ (8)ರಲ್ಲಿ ದೋಷಾರೋಪಣಾ ಪಟ್ಟಿ ಜಾರಿ ಮಾಡಲಾಗಿತ್ತು ಮೇಲೆ ಓದಲಾದ (9)ರಲ್ಲಿ ಸದರಿ ನೌಕರರು ರಕ್ಷಣಾ ಹೇಳಿಕೆ ಸಲ್ಲಿಸಿರುತ್ತಾರೆ, ಮೇಲೆ ಓದಲಾದ (10)ರಲ್ಲಿ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಲಾಗಿದ್ದು, ಮೇಲೆ ಓದಲಾದ (11) ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ ಮೇಲೆ ಓದಲಾದ (12)ರಲ್ಲಿ ಸದರಿ ನೌಕರರಿಗೆ ಎರಡನೇ ಸೂಚನಾ ಪತ್ರವನ್ನು ಜಾರಿಗೊಳಿಸಲಾಗಿತ್ತು, ಮೇಲೆ ಓದಲಾದ (13)ರಲ್ಲಿ ಸದರಿ ನೌಕರರು ರಕ್ಷಣಾ ಹೇಳಿಕೆ ಸಲ್ಲಿಸಿರುತ್ತಾರೆ, ನೌಕರರು ಅನುಕಂಪದ ಆಧಾರದ ಮೇಲೆ ನೇಮಕಾತಿ ಹೊಂದಲು ಸುಳ್ಳು ದಾಖಲೆಗಳನ್ನು ನೀಡಿ ನೇಮಕಾತಿ ಹೊಂದಿರುವುದು ವಿಚಾರಣೆಯಿಂದ ದೃಢಪಟ್ಟಿರುವುದರಿಂದ ಕೆ.ಸಿ.ಎಸ್(ಸಿಸಿಎ) ನಿಯಮಾವಳಿಗಳು 1957ರ ನಿಯಮ 8(ii) ರಿಂದ 8(viii) ವರೆಗಿನ ದಂಡನೆಯನ್ನು ವಿಧಿಸುವ ಸಕ್ಷಮ ಶಿಸ್ತು ಪ್ರಾಧಿಕಾರಿಯಾಗಿರುವುದರಿಂದ ವಿಚಾರಣಾ ಪ್ರಾಧಿಕಾರಿಗಳು ನೀಡಿರುವ ವರದಿಯಲ್ಲಿ ಆರೋಪವು ಸಾಭೀತಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(1)ಸಿಆರ್–48/2004–05 ದಿನಾಂಕ : 16–01–2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ. ಬಿ. ಪಾಟೀಲ್, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು **ಶ್ರೀಮತಿ ಸುಬ್ಬಲಕ್ಷ್ಮಮ್ಮ ಗ್ರೂಪ್ 'ಡಿ' ಪ್ರಾ.ಆ, ಕೇಂದ್ರ ಬೈಲನರಸಾಪುರ ಹೊಸಕೋಟೆ ತಾಲ್ಲೂಕು ಬೆಂಗಳೂರು ಗ್ರಾಮಾಂತರ ಜಿಲ್ಲೆ** ಇವರ ಮೇಲಿನ ಆರೋಪವನ್ನು ಗಂಭೀರವಾಗಿ ಪರಿಗಣಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ರೀತ್ಯಾ ಹಾಗೂ **ಸರ್ಕಾರಿ ಸೇವೆಗೆ ಪುನಃ ನೇಮಕಾತಿ ಹೊಂದಲು ಅನರ್ಹನಾಗುವ ರೀತಿ ನಿಯಮ 8 (viii)ರ ಮೇರೆಗೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿರುತ್ತೇನೆ.**

**ಆಯುಕ್ತರು,**

P.R. 96

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು–9

## ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು

**ವಿಷಯ :** ಶ್ರೀಮತಿ ಲೂಸಿಡಿಸೋಜ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ದೇವಂಗಿ ತೀರ್ಥಹಳ್ಳಿ (ತಾ) ಶಿವಮೊಗ್ಗ ಜಿಲ್ಲೆ. ಇವರ ಅನಧಿಕೃತ ಗೈರು ಹಾಜರಾಗಿರುವ ಆರೋಪದ ವಿರುದ್ಧ ಶಿಸ್ತುಕ್ರಮ– ಅಂತಿಮ ಆದೇಶ.

**ಓದಲಾಗಿದೆ :**

1. ವಿಚಾರಣಾ ವರದಿ ಸಂಖ್ಯೆ : ಮುಜಾಅ/ಜಾಕೋ/ಎನ್‌ಜಿ/22/03–04, ದಿನಾಂಕ : 05–02–2004.
2. ಆಯುಕ್ತರ ಆದೇಶ ಸಂಖ್ಯೆ : ಡಿಪಿಎನ್ (1) ಸಿಆರ್/154/01–02, ದಿನಾಂಕ : 22–01–2005.
3. ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ : 881/2005. ತೀರ್ಪು ದಿನಾಂಕ : 30–03–2011.
4. ಮಾನ್ಯ ಉಚ್ಚ ನ್ಯಾಯಾಲಯದ ಅರ್ಜಿ ಸಂಖ್ಯೆ : 28808/2011, ದಿನಾಂಕ : 13/02/2012.

**ಪ್ರಸ್ತಾವನೆ :**

ಶ್ರೀಮತಿ ಲೂಸಿಡಿಸೋಜ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ದೇವಂಗಿ ತೀರ್ಥಹಳ್ಳಿ (ತಾ) ಶಿವಮೊಗ್ಗ ಜಿಲ್ಲೆ. ಆದ ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ತಾಳಗುಪ್ಪ ಶಿವಮೊಗ್ಗ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ : 01–02–1975 ರಿಂದ 30–06–1975ರ ವರೆಗೆ ಮತ್ತು ದಿನಾಂಕ : 31–10–1975 ರಿಂದ 02–02–1983ರ ವರೆಗಿನ ಅನಧಿಕೃತ ಗೈರು ಹಾಜರಿ ಆರೋಪದ ಮೇಲೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ಮೇಲೆ ಓದಲಾದ ಉಲ್ಲೇಖ (1)ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವರದಿ ಸಲ್ಲಿಸಿದ್ದು, ವರದಿಯಲ್ಲಿ ಆರೋಪವನ್ನು ಆಪಾದಿತ ನೌಕರರು ಸ್ವ–ಇಚ್ಛೆಯಿಂದ ಒಪ್ಪಿಕೊಂಡಿದ್ದಾರೆ. ಮತ್ತು ದಾಖಲೆಗಳಿಂದ ದೃಢಪಟ್ಟಿದೆ. ಆದ ಪ್ರಯುಕ್ತ ಈ ಪ್ರಕರಣದಲ್ಲಿ ಆಪಾದಿತ ನೌಕರರ ಮೇಲಿನ ಆರೋಪ ಸಾಭೀತಾಗಿದೆ ಎಂದು ಅಭಿಪ್ರಾಯ ನೀಡಿದ್ದು, ಈ ಆದೇಶದ ಅನ್ವಯ ಮೇಲೆ ಓದಲಾದ ಉಲ್ಲೇಖ (2)ರಲ್ಲಿ ಮಾನ್ಯ ಆಯುಕ್ತರು ಗೈರು ಹಾಜರಿ ಆರೋಪವು ಸಾಭೀತಾಗಿರುವುದರಿಂದ ದಂಡನೆಯಾಗಿ 1957ರ ಕರ್ನಾಟಕ ನಾಗರೀಕ ಸೇವಾ ನಿಯಮ (8–viii)ರ ಅನ್ವಯ ಸೇವೆಯಿಂದ ವಜಾಗೊಳಿಸಿ ಆದೇಶ ನೀಡಿದೆ.

ಈ ಆದೇಶದ ವಿರುದ್ಧ ಆಪಾದಿತರು ಮೇಲೆ ಓದಲಾದ (3)ರಲ್ಲಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ದಾವೆ ಹೂಡಿ ಘನ ನ್ಯಾಯಾಲಯ ದಿನಾಂಕ : 10–07–2006ರಂದು ಅರ್ಜಿಯನ್ನು ವಜಾಗೊಳಿಸಿ ತೀರ್ಪು ನೀಡಿದೆ. ನಂತರ ಈ ಆಪಾದಿತರು ಮೇಲೆ ಓದಲಾದ (4)ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶವನ್ನು ಪ್ರಶ್ನಿಸಿ ಅರ್ಜಿ ಸಲ್ಲಿಸಿದ್ದ ಈ ಅರ್ಜಿಗೆ ತೀರ್ಪು ನೀಡಿದ ಘನ ನ್ಯಾಯಾಲಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ದಿನಾಂಕ : 30–03–2011ರ ತೀರ್ಪು ಮತ್ತು ಮೇಲೆ ಓದಲಾದ (2)ರ ಆಯುಕ್ತರ ಆದೇಶವನ್ನು ರದ್ದು ಪಡಿಸಿ ಎರಡನೇ ಪ್ರತಿವಾದಿ ನಿರ್ದೇಶಕರಿಗೆ ವಿಚಾರಣಾ ವರದಿಯನ್ನು ಪರಿಗಣಿಸಿ ಅರ್ಜಿದಾರರಿಗೆ ಸೂಕ್ತ ಉತ್ತರ ಮತ್ತು ಮುಕ್ತ ಆದೇಶವನ್ನು ಹೊರಡಿಸುವಂತೆ ಆದೇಶ ನೀಡಿದೆ. ಈ ಆದೇಶದಂತೆ ಮೇಲೆ ಓದಲಾದ (1)ರಂತೆ ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಗೈರು ಹಾಜರಿ ಆರೋಪ ಸಾಭೀತಾಗಿದ್ದು, ಸರ್ಕಾರದ ಆದೇಶ ಸಿಆಸುಇ 18ಸೇಇವಿ 2001 ಸುತ್ತೋಲೆ ಪ್ರಕಾರ ಗೈರು ಹಾಜರಿ ಅವಧಿಯು 04 ತಿಂಗಳು ಮೀರಿದ್ದಲ್ಲಿ ಸೇವೆಯಿಂದ ವಜಾ ಮಾಡುವ ಅಥವಾ ತೆಗೆದುಹಾಕುವ ದಂಡನೆಯನ್ನು ವಿಧಿಸಲು ಅವಕಾಶ ಕಲ್ಪಿಸಿರುವುದರಿಂದ 8 ವರ್ಷಗಳ ಮೇಲ್ಪಟ್ಟು ಗೈರು ಹಾಜರಿಯನ್ನು ಗಂಭೀರವಾಗಿ ಪರಿಗಣಿಸಿ ಮೇಲೆ ಓದಲಾದ (2)ರ ಆದೇಶ ದಿನಾಂಕ : 22–01–2005ರಂದು ಹೊರಡಿಸಿದ ದಿನಾಂಕದಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿರುವುದನ್ನು ಸ್ಥಿರೀಕರಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(1)ಸಿಆರ್–154/2004–05 ದಿನಾಂಕ : 16–01–2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ರೀತ್ಯಾ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ॥ ಬಿ. ಎನ್. ಧನ್ಯಕುಮಾರ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು **ಶ್ರೀಮತಿ ಲೂಸಿ ಡಿಸೋಜ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ದೇವಂಗಿ ತೀರ್ಥಹಳ್ಳಿ (ತಾ) ಶಿವಮೊಗ್ಗ ಜಿಲ್ಲೆ**. ಇವರ 8 ವರ್ಷಗಳ ಮೇಲ್ಪಟ್ಟ ಗೈರು ಹಾಜರಿಯ ಆರೋಪ ಸಾಭೀತಾಗಿರುವುದರಿಂದ ಈಗಾಗಲೇ ಮೇಲೆ ಓದಲಾದ (2)ರ ಆದೇಶದ ದಿನಾಂಕ : 22–01–2005 ರಂದು ಸೇವೆಯಿಂದ ವಜಾ ಆದ ದಿನಾಂಕದಿಂದಲೇ ಅನ್ವಯಿಸುವಂತೆ ಸದರಿ ನಿಮಯ **(8–viii) ರ ಅನ್ವಯ ಸೇವೆಯಿಂದ ವಜಾ ಆದ ಆದೇಶವನ್ನು ಸ್ಥಿರೀಕರಿಸಿದ್ದೇನೆ.**

**ನಿರ್ದೇಶಕರು,**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು,
ಬೆಂಗಳೂರು–9

P.R. 97

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

### ಪ್ರಕಟಣೆ

**ಸಂ.ಕಾಅಚಿ/ಡಬ್ಲ್ಯೂಸಿಎ/ಎಫ್‌ಸಿ– 01/2013**

| ಅರ್ಜಿದಾರರು | ವಿರುದ್ಧ ಪ್ರತಿವಾದಿಗಳು |
|---|---|
| 1) ಶ್ರೀಮತಿ ಪದ್ಮಮ್ಮ ಕೋಂ ಲೇಟ್ ನರಸಿಂಹಮೂರ್ತಿ | ಆಡಳಿತವರ್ಗ, ಮೆ: ಕ್ಯೂ.ವಿ.ಸಿ. ರಿಯಾಲಿಟಿ |
| 2) ಕು: ಸುಧಾರಾಣಿ ಬಿನ್ ಲೇಟ್ ನರಸಿಂಹಮೂರ್ತಿ | ಕಂಪನಿ ಪ್ರೈವೇಟ್ ಲಿಮಿಟೆಡ್ |
| 3) ಕು: ಚಂದನ ಬಿನ್ ಲೇಟ್ ನರಸಿಂಹಮೂರ್ತಿ | ನಂದಿ ಗ್ರಾಮ ಮತ್ತು ಹೋಬಳಿ |
| 4) ಮಾ: ಸುನೀಲ್ ಬಿನ್ ಲೇಟ್ ನರಸಿಂಹಮೂರ್ತಿ | ಚಿಕ್ಕಬಳ್ಳಾಪುರ ತಾಲ್ಲೂಕು ಮತ್ತು ಜಿಲ್ಲೆ. |
| 5) ಕು: ಸ್ಫೂರ್ತಿ ಬಿನ್ ಲೇಟ್ ನರಸಿಂಹಮೂರ್ತಿ | |
| 6) ಶ್ರೀ ಚಿಕ್ಕಮುನಿಶಾಮಪ್ಪ ಬಿನ್ ಗುಳ್ಳಪ್ಪ | |
| 7) ಶ್ರೀಮತಿ ಮುನಿತಾಯಮ್ಮ ಕೋಂ ಚಿಕ್ಕಮುನಿಶಾಮಪ್ಪ<br>ಸಿದ್ಧಾರ್ಥನಗರ, ಅಂಗಟ್ಟಗ್ರಾಮ,<br>ನಂದಿ ಗ್ರಾಮ ಮತ್ತು ಹೋಬಳಿ<br>ಚಿಕ್ಕಬಳ್ಳಾಪುರ ತಾಲ್ಲೂಕು ಮತ್ತು ಜಿಲ್ಲೆ. | |

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಪ್ರಕರಣದಲ್ಲಿನ ಮೃತ ನರಸಿಂಹಮೂರ್ತಿ ಪ್ರತಿವಾದಿಯ ಅಧೀನದಲ್ಲಿ ಕಾರ್ಮಿಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 02–01–2013 ರಂದು ಉದ್ಯೋಗದಿಂದ ಮತ್ತು ಉದ್ಯೋಗದ ಸಮಯದಲ್ಲಿ ಮರಣ ಹೊಂದಿದ್ದು ಆ ಪ್ರಯುಕ್ತ ಪ್ರತಿವಾದಿಯವರು ದಿನಾಂಕ: 16–01–2013 ರಂದು ಡಿಮ್ಯಾಂಡ್ ಡ್ರಾಫ್ಟ್ ಸಂಖ್ಯೆ 024440ರ ಮೂಲಕ ಮೃತನ ವಾರಸುದಾರರಿಗೆ ಪಾವತಿಸಲು ಅನುಕೂಲವಾಗುವಂತೆ ರೂ.7,00,000/– ಗಳ ಪರಿಹಾರವನ್ನು ಈ ನ್ಯಾಯಾಲಯದಲ್ಲಿ ಠೇವಣಿ ಇರಿಸಿದ್ದಾರೆ.

ಆದ್ದರಿಂದ ಮೇಲ್ಕಂಡ 1 ರಿಂದ 7ರ ವರೆಗಿನ ಮೃತನ ವಾರಸುದಾರರುಗಳನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರುಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಹೆಚ್. ಗೋಪಾಲ ಗೌಡ,**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

PR 81

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

### ಪ್ರಕಟಣೆ

**ಸಂ.ಕಾಅಚಿ/ಡಬ್ಲ್ಯೂಸಿಎ/ಎಫ್‌ಸಿ– 02/2013**

| ಅರ್ಜಿದಾರರು | ವಿರುದ್ಧ ಪ್ರತಿವಾದಿಗಳು |
|---|---|
| 1) ಮುನಿ ನಾರಾಯಣಪ್ಪ ಬಿನ್ ರಾಮಯ್ಯ | ಆಡಳಿತವರ್ಗ ಮೆ: ಕ್ಯೂ.ವಿ.ಸಿ. ರಿಯಾಲಿಟಿ |
| 2) ಶ್ರೀಮತಿ ರತ್ನಮ್ಮ ಕೋಂ ಮುನಿ ನಾರಾಯಣಪ್ಪ | ಕಂಪನಿ ಪ್ರೈವೇಟ್ ಲಿಮಿಟೆಡ್ |
| ನಂದಿ ಗ್ರಾಮ ಮತ್ತು ಹೋಬಳಿ | ನಂದಿ ಗ್ರಾಮ ಮತ್ತು ಹೋಬಳಿ, ಚಿಕ್ಕಬಳ್ಳಾಪುರ ತಾಲ್ಲೂಕು ಮತ್ತು ಜಿಲ್ಲೆ. |
| ಚಿಕ್ಕಬಳ್ಳಾಪುರ ತಾಲ್ಲೂಕು ಮತ್ತು ಜಿಲ್ಲೆ. | |

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಪ್ರಕರಣದಲ್ಲಿನ ಮೃತ ಮುನೇಗೌಡ ಪ್ರತಿವಾದಿಯ ಅಧೀನದಲ್ಲಿ ಕಾರ್ಮಿಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 02–01–2013 ರಂದು ಉದ್ಯೋಗದಿಂದ ಮತ್ತು ಉದ್ಯೋಗದ ಸಮಯದಲ್ಲಿ ಮರಣ ಹೊಂದಿದ್ದು ಆ ಪ್ರಯುಕ್ತ ಪ್ರತಿವಾದಿಯವರು ದಿನಾಂಕ: 16–01–2013 ರಂದು ಡಿಮ್ಯಾಂಡ್ ಡ್ರಾಫ್ಟ್ ಸಂಖ್ಯೆ 024441ರ ಮೂಲಕ ಮೃತನ ತಂದೆ, ತಾಯಿಗೆ ಪಾವತಿಸಲು ಅನುಕೂಲವಾಗುವಂತೆ ರೂ.6,50,000/– ಗಳ ಪರಿಹಾರವನ್ನು ಈ ನ್ಯಾಯಾಲಯದಲ್ಲಿ ಠೇವಣಿ ಇರಿಸಿದ್ದಾರೆ.

ಆದ್ದರಿಂದ ಮೇಲ್ಕಂಡ ಮೃತನ ವಾರಸುದಾರರುಗಳನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರುಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನುರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಹೆಚ್. ಗೋಪಾಲ ಗೌಡ,**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

PR 84

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಪ್ರಕಟಣೆ**

**ಸಂ.ಕಾಅಚಿ/ಡಬ್ಲ್ಯೂಸಿಎ/ಎಫ್‌ಸಿ– 01/2011**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ಸಾವಿತ್ರಮ್ಮ, ಕೋಂ ಲೇಟ್‌ನರಸಪ್ಪ<br>2) ಶ್ರೀ ವೆಂಕಟೇಶ್ ಬಿನ್ ಲೇಟ್ ನರಸಪ್ಪ<br>ವಾಸ: ಅಗ್ರಹಾರ, ಚಿಂತಾಮಣಿ ಟೌನ್, ಚಿಕ್ಕಬಳ್ಳಾಪುರ ಜಿಲ್ಲೆ. | | 1) ಶ್ರೀ ಮಂಜುನಾಥ ಬಿನ್ ಗೋಪಾಲರೆಡ್ಡಿ<br>ವಾಸ: ದೊಡ್ಡಗಂಜೂರು ಗ್ರಾಮ, ಚಿಂತಾಮಣಿ ತಾಲ್ಲೂಕು ಚಿಕ್ಕಬಳ್ಳಾಪುರ ಜಿಲ್ಲೆ.<br>2) ವ್ಯವಸ್ಥಾಪಕರು, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ದೊಡ್ಡಪೇಟೆ, ಕೋಲಾರ ಟೌನ್. |

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಪ್ರಕರಣದಲ್ಲಿನ ಮೃತ ರಾಘವೇಂದ್ರ 1ನೇ ಪ್ರತಿವಾದಿಯ ಅಧೀನದಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ 06–06–2008ರಂದು ಮರಣ ಹೊಂದಿದ್ದು ಇವರ ಪತ್ನಿ ಶ್ರೀಮತಿ ಸಾವಿತ್ರಮ್ಮ ಮತ್ತು ಇನ್ನೊಬ್ಬರು ಈ ನ್ಯಾಯಾಲಯದಲ್ಲಿ ಬೇಡಿಕೆ ಅರ್ಜಿಯನ್ನು ಸಲ್ಲಿಸಿ, ಮೃತರ ವಾರಸುದಾರರಾದ ತಮಗೆ ಪ್ರತಿವಾದಿಯವರಿಂದ ಕಾನೂನು ರೀತ್ಯ ಪರಿಹಾರವನ್ನು ಸೂಕ್ತ ಬಡ್ಡಿಯೊಂದಿಗೆ ಕೊಡಿಸಿಕೊಡಬೇಕೆಂದು ಪ್ರಾರ್ಥಿಸಿಕೊಂಡಿರುತ್ತಾರೆ.

ಆದ್ದರಿಂದ ಮೇಲ್ಕಂಡ ಅರ್ಜಿದಾರರುಗಳನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಹೆಚ್. ಗೋಪಾಲ ಗೌಡ,**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

PR 7

## ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ,ಕೊಪ್ಪಳ ಜಿಲ್ಲೆ, ಕೊಪ್ಪಳ

**ಪ್ರಕರಣ ಸಂ:ಕಾಅಕೊ:ಕಾನಪ: ಮರಣ ಪ್ರಕರಣ–03/2013 ದಿನಾಂಕ: 16–1–2013**

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1. ಶ್ರೀಮತಿ ರೇಖಾಗಂಡ ಲೇಟ್ ಬಾಳಪ್ಪ ಕಳಸಪ್ಪನವರ್, ವಯಸ್ಸು: 24 ವರ್ಷ, ಉದ್ಯೋಗ: ಮನೆಗೆಲಸ ಆರ್/ಒ: ಬಂಡಿಹಾಳ್, ತಾ: ಯಲಬುರ್ಗಾ, ಜಿ: ಕೊಪ್ಪಳ. | 1. ಎಮ್.ಎಸ್.ಬಾಳಗಂಗಾಧರ ತಂದೆ ಎಮ್.ಡಿ.ಶಂಕರನಾರಾಯಣ, ವ: ಮೇಜರ್, ಉದ್ಯೋಗ: ಟ್ಯಾಂಕರ್ ಬಿಯರಿಂಗ್ ಮಾಲೀಕರು, ನಂ: ಕೆ.ಎ–05/ಎಡಿ–4260, ಆರ್/ಒ:ನಂ: 46, 2ನೇ ಕ್ರಾಸ್, ಸೊಮೇಶ್ವರ ನಗರ ಮೇನ್‌ರೋಡ್, ಅರೆಕೆಂಪನಹಳ್ಳಿ, ಬೆಂಗಳೂರು.<br>2. ಡಿವಿಜನಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂ.ಲಿ. ಎಸ್.ಬಿ.ಐ. ಉಪಸ್ಟೈಯರ್ಸ್, ಪ್ರಿಯದರ್ಶಿನಿ ಹೊಟೆಲ್ ಹಿಂದುಗಡೆ, ಸ್ಟೇಶನ್‌ರೋಡ್, ಹೊಸಪೇಟೆ.<br>3. ಶಾಂತವ್ವಗಂಡ ಲೇಟ್ ವಿರುಪಾಕ್ಷಪ್ಪ ಕಳಸಪ್ಪನವರ್, ವ: 55ವರ್ಷ, ಉದ್ಯೋಗ: ಹೌಸ್‌ಹೋಲ್ಡ್, ಆರ್/ಒ: ಬಂಡಿಹಾಳ್, ತಾ: ಯಲಬುರ್ಗಾ, ಜಿ: ಕೊಪ್ಪಳ. |

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಬಾಳಪ್ಪ ವಿರುಪಾಕ್ಷಪ್ಪ ಕಳಸಪ್ಪನವರ್ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ, ದಿನಾಂಕ: 19–09–2012 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ: ಚನ್ನಪ್ಪ ತಂದೆ ಹನುಮಣ್ಣ ಇವರ ವಾರಸುದಾರರಾದ ಶ್ರೀಮತಿ ರೇಖಾ ಗಂಡ ಲೇಟ್ ಬಾಳಪ್ಪ ಕಳಸಪ್ಪನವರ್, ವಯಸ್ಸು: 24 ವರ್ಷ, ಉದ್ಯೋಗ: ಮನೆಗೆಲಸ ಆರ್/ಒ: ಬಂಡಿಹಾಳ್, ತಾ: ಯಲಬುರ್ಗಾ, ಜಿ: ಕೊಪ್ಪಳ. ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಣೆಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನು ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

**ಕೆ.ಪಿ.ಮುಸಿಯಪ್ಪ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

PR.86

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:13/11-12, ದಿನಾಂಕ:06-10-2012**

| | | |
|---|---|---|
| **ಉಪಸ್ಥಿತರು** | :: | ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, (ಸಹಾಯಕ ಸರ್ಕಾರಿ ಅಭಿಯೋಜಕರು) |
| **ಬಾಧ್ಯತೆದಾರರು** | :: | ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ:-**

ದಿ:15-08-2011ರಂದು ಮಾರುತಿ ವ್ಯಾನ್ ಕೆಎ-05-ಎಂಎ-6883ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವಾಗ ಸಾಲೂರು ಶಾಖೆಯ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:15-08-2011 ರಂದು ಅಂಬ್ಲಿಗೊಳ ವಲಯದ ಸಾಲೂರು ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾ. ಕಸಬಾ ಹೋಬಳಿ, ಬೆಳಂದೂರು ಮನ್ನಾ ಜಂಗ್ಲಿಯಲ್ಲಿ ಹಾದು ಹೋಗುವ ಮುಡುಬಸಿದ್ದಾಪುರ ರಸ್ತೆಯಲ್ಲಿ ಕಾಯುತ್ತಿರುವಾಗ ಒಂದು ವಾಹನ ಬರುತ್ತಿರುವುದನ್ನು ಬ್ಯಾಟರಿ ಬೆಳಕಿನ ಸಹಾಯದಿಂದ ನಿಲ್ಲಿಸಲು ಸೂಚಿಸಿದಾಗ ಇಲಾಖೆಯವರಿಗಿಂತ ಸ್ವಲ್ಪ ದೂರ ವಾಹನ ನಿಲ್ಲಿಸಿ, ವಾಹನದಲ್ಲಿದ್ದ ಎರಡು ಜನ ಆಸಾಮಿಗಳು ವಾಹನದಿಂದ ಇಳಿದು ಓಡಲು ಪ್ರಾರಂಭಿಸಿದರು. ಓಡಿ ಹೋದ ಆಸಾಮಿಗಳನ್ನು ಬೆನ್ನಟ್ಟಿ ಹಿಡಿಯಲಾಯಿತು. ಸಿಕ್ಕಿಬಿದ್ದ ಆಸಾಮಿಯ ಹೆಸರು ಕೇಳಲಾಗಿ ಅವನ ಹೆಸರು ಮಂಜಪ್ಪ ಬಿನ್ ಸುಬ್ಬಪ್ಪ, 34 ವರ್ಷ , ಬರೂರು ಗ್ರಾಮ, ಸಾಗರ ತಾಲ್ಲೂಕು ಮತ್ತೊಬ್ಬ ಉಮೇಶ್ ಬಿನ್ ಮಹಾಬಲಪ್ಪ, ನಾಡವಳ್ಳಿ ವಾಸಿ, ಸೊರಬ ತಾಲ್ಲೂಕು ಮತ್ತು ಅಂಚೆ ಎಂದು ತಿಳಿಸಿದರು. ನಂತರ ವಾಹನ ಪರಿಶೀಲಿಸಲಾಗಿ ಅದು ಮಾರುತಿ ವ್ಯಾನ್ ಕೆಎ-05-ಎಂಎ-6883 ಆಗಿದ್ದು, ಈ ವಾಹನದೊಳಗಡೆ ಹಸಿಯಾದ 8 ಬೀಟೆ ನಾಟಾಗಳಿದ್ದು, ಅವುಗಳನ್ನು ಅಳತೆ ಮಾಡಲಾಗಿ 0.336ಎಂ3 ಪ್ರಮಾಣವಿರುತ್ತದೆ. ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಹಾಗೂ ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಆಸಾಮಿಗಳು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 80, 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಸಾಲೂರು ಶಾಖೆ ವನಪಾಲಕರು ಅರಣ್ಯ ಮೊಕದ್ದಮೆ ಸಂಖ್ಯೆ:33/11-12ನ್ನು ದಾಖಲಿಸಿರುತ್ತಾರೆ. ನಂತರ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಸಿಕ್ಕಿಬಿದ್ದ ಆಸಾಮಿಗಳನ್ನು ಜೆ.ಎಂ.ಎಫ್.ಸಿ, ಶಿಕಾರಿಪುರಕ್ಕೆ ಒಪ್ಪಿಸಿ, ನಂತರ ಈ ವಾಹನ ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸಾಗರದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3-ಅಮೊ-ವಾಹನ-ವಿವ-13/11-12 ದಿ:24-08-2011 ಮತ್ತು 01-03-2012ರಂದು ಸಾರಿಗೆ ಅಧಿಕಾರಿ, ಜಯನಗರ (ದಕ್ಷಿಣ), ಬೆಂಗಳೂರು ಇವರಿಗೆ ಪತ್ರ ಬರೆದು ಕೋರಲಾಯಿತು. ಆದರೆ ಸಾರಿಗೆ ಅಧಿಕಾರಿ, ಬೆಂಗಳೂರು ಇವರು ಈ ನ್ಯಾಯಾಲಯಕ್ಕೆ ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಇಲ್ಲಿಯವರೆಗೆ ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಆರ್.ಸಿ.ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(i)ರ ಪ್ರಕಾರ ನೋಟೀಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3-ಅಮೊ-ವಾಹನ-ಪ್ರಕಟಣೆ-ಸಿಆರ್-22/11-12 ದಿ:26-09-2011ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:07-10-2011ರಂದು ಕನ್ನಡ ಪ್ರಭ & ದಿ:05-10-2011ರಂದು ಉದಯವಾಣಿ ದಿನಪತ್ರಿಕೆಗಳಲ್ಲಿ ಹಾಗೂ ದಿ:19-04-2012 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:01-09-2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಅಂಬ್ಲಿಗೊಳ ವಲಯದ ಸಾಲೂರು ಶಾಖಾ ವನಪಾಲಕರು ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಫ್ತು ವರದಿಯನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಕೆಎ-05-ಎಂಎ-

6883 (ಛಾಸ್ಸಿಸ್ ನಂ 91IN922943 &, ಇಂಜಿನ್ ನಂ: 117775) ವನ್ನು ಮತ್ತು ಈ ವಾಹನದಲ್ಲಿದ್ದ, ಬೀಟೆ ನಾಟಾ 08=0.336ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:06-10-2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್,**

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**PR.29**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:17/11-12, ದಿನಾಂಕ:06-10-2012**

| | | |
|---|---|---|
| **ಉಪಸ್ಥಿತರು** | :: | ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, (ಸಹಾಯಕ ಸರ್ಕಾರಿ ಅಭಿಯೋಜಕರು) |
| **ಬಾಧ್ಯತೆದಾರರು** | :: | ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ:-**

ದಿ:09-09-2011ರಂದು ಟಾಟಾ 909 ಕೆಎ-15-3572ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವಾಗ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:09-09-2011 ರಂದು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾ. ಅಂಜನಾಪುರ ಹೋಬಳಿ, ಅರಿಶಿನಗೆರೆಯಿಂದ ಈಸೂರಿಗೆ ಹೋಗುವ ಕಚ್ಚಾ ರಸ್ತೆಯ ಸೇತುವೆ ಬಳಿ ಕಾಯುತ್ತಿರುವಾಗ ಬೆಳಗಿನ ಜಾವ ಒಂದು ವಾಹನವು ಅರಿಶಿನಗೆರೆ ಕಡೆಯಿಂದ ಈಸೂರು ಕಡೆ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ಇಲಾಖೆಯವರನ್ನು ನೋಡಿ ವಾಹನವನ್ನು ಸ್ವಲ್ಪ ದೂರ ಹಿಂದೆ ನಿಲ್ಲಿಸಿ, ವಾಹನದಲ್ಲಿದ್ದ ಆಸಾಮಿಗಳು ವಾಹನದಿಂದ ಇಳಿದು ಓಡಲು ಪ್ರಾರಂಭಿಸಿದರು. ಅವರಲ್ಲಿ ಇಬ್ಬರನ್ನು ಹಿಡಿಯಲು ಸಾಧ್ಯವಾಯಿತು. ಉಳಿದ 2 ಜನ ಓಡಿ ಕೈಗೆ ಸಿಗದೇ ಪರಾರಿಯಾದರು. ಕೈಗೆ ಸಿಕ್ಕಿದ ಆಸಾಮಿಗಳ ಹೆಸರನ್ನು ವಿಚಾರಿಸಲಾಗಿ 1. ಹೆಚ್.ಗಣೇಶ ಬಿನ್ ವಲ್ಕಯ್ಯ, 50 ವರ್ಷ, ಮಾವಿನಕೊಪ್ಪಲು, ಹೊಸನಗರ, ವಾಹನದ ಮಾಲೀಕ ಮತ್ತು 2. ಸುಧೀರ್ ಬಿನ್ ಹೆಚ್ ಗಣೇಶ್(ವಾಹನ ಮಾಲೀಕರ ಮಗ) ಓಡಿ ಹೋದವರು 1. ಜಗನ್ನಾಥ ಬಿನ್ ವೀರಪ್ಪ, 42 ವರ್ಷ, ಈಸೂರುವಾಸಿ 2. ಸೀತಾರಾಮಯ್ಯ ಬಿನ್ ನಿಂಗ್ಯಾ ನಾಯ್ಕ, 36 ವರ್ಷ, ಗೌಟೂರು ವಾಸಿ, ರಿಪ್ಪನ್ ಪೇಟೆ ಹೋಬಳಿ ಎಂದು ಮತ್ತು ಮಾವಿನಕಟ್ಟೆ ಸಮೀಪದ ಅರಣ್ಯದಲ್ಲಿದ್ದ ಬೀಟೆ ಮರವನ್ನು ಕಡಿದು ಈ ವಾಹನದಲ್ಲಿ ರಹದಾರಿ ಇಲ್ಲದೇ ಈಸೂರಿಗೆ ಸಾಗಿಸುತ್ತಿದ್ದೇವೆಂದು ತಿಳಿಸಿದರು. ನಂತರ ವಾಹನ ಪರಿಶೀಲಿಸಲಾಗಿ ಅದು ಟಾಟಾ 909 ಕೆಎ-15-3572 ಆಗಿದ್ದು, ಈ ವಾಹನದೊಳಗಡೆ ಹಸಿಯಾದ 07 ಬೀಟೆ ನಾಟಾಗಳಿದ್ದು, ಅವುಗಳನ್ನು ಅಳತೆ ಮಾಡಲಾಗಿ 0.614ಎಂ3 ಪ್ರಮಾಣವಿರುತ್ತದೆ. ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಹಾಗೂ ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಆಸಾಮಿಗಳು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ಇವರು ಅರಣ್ಯ ಮೊಕದ್ದಮೆ ಸಂಖ್ಯೆ:40/11-12ನ್ನು ದಾಖಲಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಸಿಕ್ಕಿಬಿದ್ದ ಆಸಾಮಿಗಳನ್ನು ಜೆ.ಎಂ.ಎಫ್.ಸಿ, ಶಿಕಾರಿಪುರಕ್ಕೆ ಒಪ್ಪಿಸಿ, ನಂತರ ಈ ವಾಹನ ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸಾಗರದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3-ಅಮೊ-ವಾಹನ-ವಿವ-17/11-12 ದಿ:17-12-2011 ಮತ್ತು 11-08-2012ರಂದು ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಪತ್ರ ಬರೆದು ಕೋರಲಾಯಿತು. ಆದರೆ ಸಾರಿಗೆ ಅಧಿಕಾರಿ, ಸಾಗರ ಇವರು ಈ ನ್ಯಾಯಾಲಯಕ್ಕೆ ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಇಲ್ಲಿಯವರೆಗೆ ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಆರ್.ಸಿ.ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(i)ರ ಪ್ರಕಾರ ನೋಟೀಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3-ಅಮೊ-ವಾಹನ-ಪ್ರಕಟಣೆ-ಸಿಆರ್-23/11-12 ದಿ:26-09-2011ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:24-11-2011ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಹಾಗೂ ದಿ:19-04-2012 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:01-09-2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಅಂಬ್ಲಿಗೊಳ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತು ವರದಿಯನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ಇದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಟಾಟಾ 909 ಕೆಎ–15–3572 (ಛಾಸ್ಸಿಸ್ ನಂ 29782 &, ಇಂಜಿನ್ ನಂ: 909EX3697) ವನ್ನು ಮತ್ತು ಈ ವಾಹನದಲ್ಲಿದ್ದ, ಬೀಟೆ ನಾಟಾ 07=0.614ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:06–10–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್,**

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**PR.45**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:19/11–12, ದಿನಾಂಕ:06–10–2012**

**ಉಪಸ್ಥಿತರು** :: ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** :: ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, (ಸಹಾಯಕ ಸರ್ಕಾರಿ ಅಭಿಯೋಜಕರು)

**ಬಾಧ್ಯತೆದಾರರು** :: ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:–**

ದಿ:15–03–2011ರಂದು ಸುಜುಕಿ ಬೈಕ್ ಸಿಎಆರ್–1398ರಲ್ಲಿ ಸಾಗುವಾನಿ ಸೈಜು ಅಕ್ರಮವಾಗಿ ಸಾಗಿಸುತ್ತಿರುವಾಗ ಗಂಗವ್ವನಸರ ಗಸ್ತಿನ ಅರಣ್ಯ ರಕ್ಷಕ ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:15–03–2011 ರಂದು ಶಿಕಾರಿಪುರ ವಲಯದ ಹಾರೋಗೊಪ್ಪ ಶಾಖೆಯ ಗಂಗವ್ವನಸರ ಗಸ್ತಿನ ಅರಣ್ಯ ರಕ್ಷಕ ಮತ್ತು ಇತರೆ ಸಿಬ್ಬಂದಿಯೊಂದಿಗೆ ಶಿಕಾರಿಪುರ ತಾ. ಅಂಜನಾಪುರ ಹೋಬಳಿ, ಅಂಜನಾಪುರದಿಂದ ಹಾರೋಗೊಪ್ಪಕ್ಕೆ ಹೋಗುವ ಲೋಕೋಪಯೋಗಿ ಇಲಾಖೆಯ ರಸ್ತೆಯಲ್ಲಿ ಎಂದಿನಂತೆ ಬೆಳಗ್ಗೆ ಗಸ್ತು ತಿರುಗುತ್ತಿರುವಾಗ ಎದುರುಗಡೆಯಿಂದ ಒಂದು ವಾಹನವು ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ಬೈಕಿನಲ್ಲಿದ್ದ ಇಬ್ಬರು ಆಸಾಮಿಗಳು ಇಲಾಖೆಯವರನ್ನು ನೋಡಿ ಸ್ವಲ್ಪ ದೂರ ಹಿಂದೆ ವಾಹನ ನಿಲ್ಲಿಸಿ, ವಾಹನದಲ್ಲಿದ್ದ ಆಸಾಮಿಗಳು ವಾಹನದಿಂದ ಇಳಿದು ಓಡಲು ಪ್ರಾರಂಭಿಸಿದರು. ಓಡಿ ಹೋದವರನ್ನು ಇಲಾಖೆಯವರು ಬೆನ್ನಟ್ಟಿದರೂ ಕೈಗೆ ಸಿಗದೆ ಪರಾರಿಯಾದರು. ನಂತರ ವಾಹನ ಪರಿಶೀಲಿಸಲಾಗಿ ಅದು ಸುಜುಕಿ ಬೈಕ್ ಸಿಎಆರ್–1398 ಆಗಿದ್ದು, ಈ ವಾಹನದಲ್ಲಿದ್ದ 06 ಸಾಗುವಾನಿ ಸೈಜುಗಳ ಅಳತೆ ಮಾಡಲಾಗಿ 0.056ಎಂ3 ಪ್ರಮಾಣವಿರುತ್ತದೆ. ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಹಾಗೂ ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 50ಕೆ, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಗಂಗವ್ವನಸರ ಗಸ್ತಿನ ಅರಣ್ಯ ರಕ್ಷಕ ಅರಣ್ಯ ಮೊಕದ್ದಮೆ ಸಂಖ್ಯೆ:54/10–11ನ್ನು ದಾಖಲಿಸಿರುತ್ತಾರೆ. ನಂತರ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇವರು ಈ ವಾಹನ ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸಾಗರದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–19/11–12 ದಿ:19–12–2011 ಮತ್ತು 12–09–2012ರಂದು ಸಾರಿಗೆ ಅಧಿಕಾರಿ, ರಾಜಾಜಿ ನಗರ (ಪಶ್ಚಿಮ), ಬೆಂಗಳೂರು ಇವರಿಗೆ ಪತ್ರ ಬರೆದು ಕೋರಲಾಯಿತು. ಆದರೆ ಸಾರಿಗೆ ಅಧಿಕಾರಿ, ಬೆಂಗಳೂರು ಇವರು ಈ ನ್ಯಾಯಾಲಯಕ್ಕೆ ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಇಲ್ಲಿಯವರೆಗೆ ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಆರ್.ಸಿ.ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(i)ರ ಪ್ರಕಾರ ನೋಟೀಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ–ಸಿಆರ್–23/11–12 ದಿ:26–09–2011ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು

ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:24–11–2011ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಹಾಗೂ ದಿ:19–04–2012 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:01–09–2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಶಿಕಾರಿಪುರ ವಲಯದ ಗಂಗವ್ವನಸರ ಗಸ್ತಿನ ಅರಣ್ಯ ರಕ್ಷಕ ಮತ್ತು ಇತರೆ ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಫ್ತು ವರದಿಯನ್ನು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಸಾಗುವಾನಿ ಸೈಜುಗಳನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಸುಜುಕಿ ಬೈಕ್ ಸಿಎಆರ್–1398 (ಛಾಸ್ಸಿಸ್ ನಂ 3504F000237 &, ಇಂಜಿನ್ ನಂ: 3503M006854)ನ್ನು ಮತ್ತು ಈ ವಾಹನದಲ್ಲಿದ್ದ, ಸಾಗುವಾನಿ ಸೈಜು 06=0.056ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:06–10–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್,**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**PR.30**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:20/11–12, ದಿನಾಂಕ:06–10–2012**

| | | |
|---|---|---|
| **ಉಪಸ್ಥಿತರು** | :: | ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, (ಸಹಾಯಕ ಸರ್ಕಾರಿ ಅಭಿಯೋಜಕರು) |
| **ಬಾಧ್ಯತೆದಾರರು** | :: | ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ:–**

ದಿ:19–09–2011ರಂದು ಹೀರೋ ಹೋಂಡಾ ಸ್ಪ್ಲೆಂಡರ್ ಬೈಕ್ ಕೆಎ–14–U–2215ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವಾಗ ಶಿಕಾರಿಪುರ ನಗರ ತನಿಖೆ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:19–09–2011 ರಂದು ಶಿಕಾರಿಪುರ ವಲಯದ ನಗರ ತನಿಖೆ ವನಪಾಲಕ ಮತ್ತು ಸಿಬ್ಬಂದಿಯವರು ನಗರ ತನಿಖೆ ಕಾರ್ಯದಲ್ಲಿರುವಾಗ ಒಂದು ಬೈಕ್‌ನಲ್ಲಿ ಬೀಟೆ ನಾಟಾ ಸಾಗಿಸುತ್ತಿರುವುದನ್ನು ನೋಡಿ ನಿಲ್ಲಿಸಲು ಸೂಚಿಸಿದಾಗ ಬೈಕ್ ಚಾಲಕನು ಬೈಕ್‌ನ್ನು ಸ್ಥಳದಲ್ಲಿ ಬಿಟ್ಟು ಓಡಲು ಪ್ರಾರಂಭಿಸಿದನು. ಅವನ ಜೊತೆಯಲ್ಲಿ ಮತ್ತೊಬ್ಬನಿದ್ದು ಅವನನ್ನು ಇಲಾಖೆಯವರು ಹಿಡಿದರು. ಆದರೆ ಚಾಲಕನು ಕೈಗೆ ಸಿಗದೆ ಪರಾರಿಯಾಗಿರುತ್ತಾನೆ. ಹಿಡಿದ ಆಸಾಮಿಯ ಹೆಸರನ್ನು ವಿಚಾರಿಸಿದಾಗ ಅವನ ಹೆಸರು ಪರಶುರಾಮ ಬಿನ್ ಎಲ್ಲಪ್ಪ, 23 ವರ್ಷ, ಮುಡುಬಸಿದ್ದಾಪುರ ವಾಸಿ, ಅಂಬ್ಲಿಗೊಳ ಅಂಚೆ, ಶಿಕಾರಿಪುರ ತಾಲ್ಲೂಕು ಎಂದು ಮತ್ತು ಓಡಿ ಹೋದವನ ಹೆಸರು ಮಂಜುನಾಥ ಬಿನ್ ಬಸವಣ್ಯಪ್ಪ, 25 ವರ್ಷ, ಮುಡುಬಸಿದ್ದಾಪುರ ವಾಸಿ, ಅಂಬ್ಲಿಗೊಳ ಅಂಚೆ, ಶಿಕಾರಿಪುರ ತಾಲ್ಲೂಕು ಎಂದು & ಈ ನಾಟಾ ಸಾಗಿಸಲು ರಹದಾರಿ ಇಲ್ಲವೆಂದು ತಿಳಿಸಿದನು. ನಂತರ ಸಿಕ್ಕಿಬಿದ್ದ ಆಸಾಮಿಯನ್ನು ವಾಹನದ ಹತ್ತಿರ ಕರೆತಂದು ವಾಹನ ಪರಿಶೀಲಿಸಲಾಗಿ ಅದು ಹೀರೋ ಹೋಂಡಾ ಸ್ಪ್ಲೆಂಡರ್ ಬೈಕ್ ಕೆಎ–14–U–2215 ಆಗಿದ್ದು, ಈ ವಾಹನದಲ್ಲಿದ್ದ 01 ಬೀಟೆ ನಾಟಾದ ಅಳತೆ ಮಾಡಲಾಗಿ 0.018ಎಂ3 ಪ್ರಮಾಣವಿರುತ್ತದೆ. ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಹಾಗೂ ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 50, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಶಿಕಾರಿಪುರ ನಗರ ತನಿಖಾ ವನಪಾಲಕ ಅರಣ್ಯ ಮೊಕದ್ದಮೆ ಸಂಖ್ಯೆ:58/11–12ನ್ನು ದಾಖಲಿಸಿರುತ್ತಾರೆ. ನಂತರ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇವರು ಈ ವಾಹನ ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸಾಗರದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–20/11–12 ದಿ:17–12–2011ರಂದು ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರಿಗೆ ಪತ್ರ ಬರೆದು ಕೋರಲಾಯಿತು. ಅದರಂತೆ ಸದರಿ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಸಾರಿಗೆ ಅಧಿಕಾರಿ, ಶಿವಮೊಗ್ಗದಿಂದ ಪಡೆದು ದಿ:23–01–2012ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಆರ್.ಸಿ.ಮಾಲೀಕರ ಹೆಸರು ಕುಮಾರ್ ಬಿನ್ ಕೃಷ್ಣಮೂರ್ತಿ, ಮನೆ ನಂ.417, ಹೊಸಮನೆ ಮೈನ್ ರೋಡ್, ಓಲ್ಡ್ ಟೌನ್, ಭದ್ರಾವತಿ ಎಂದು ನಮೂದಿಸಿರುತ್ತಾರೆ. ಈ ಆರ್.ಸಿ.ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(I)ರ ಪ್ರಕಾರ ನೋಟೀಸ್‌ನ್ನು ದಿ:05–04–2012ರಂದು ನೋಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ಸದರಿ ಲಕೋಟೆ ಮೇಲೆ ಅಂಚೆ ಇಲಾಖೆಯವರು "Not Claimed" ಎಂದು ನಮೂದಿಸಿ ಈ ನ್ಯಾಯಾಲಯಕ್ಕೆ ಹಿಂದಿರುಗಿಸಿರುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ–ಸಿಆರ್–23/11–12 ದಿ:26–09–2011ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:24–11–2011ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಹಾಗೂ ದಿ:19–04–2012 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:01–09–2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಶಿಕಾರಿಪುರ ವಲಯದ ನಗರ ತನಿಖೆ ವನಪಾಲಕ ಮತ್ತು ಇತರೆ ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತು ವರದಿಯನ್ನು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು ಮತ್ತು ಆರ್.ಸಿ.ಮಾಲೀಕರಿಗೆ ಕಾನೂನು ರೀತಿ ನೋಟೀಸ್ ಜಾರಿ ಮಾಡಿ 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಹೀರೋ ಹೋಂಡಾ ಸ್ಪ್ಲೆಂಡರ್ ಬೈಕ್ ಕೆಎ–14–U–2215 (ಛಾಸ್ಸಿಸ್ ನಂ 05JAAF01162 &, ಇಂಜಿನ್ ನಂ: 05JAAE00942)ನ್ನು ಮತ್ತು ಈ ವಾಹನದಲ್ಲಿದ್ದ, ಬೀಟೆ ನಾಟಾ 01=0.018ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:06–10–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್,**

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**PR.31**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:21/11–12, ದಿನಾಂಕ:06–10–2012**

**ಉಪಸ್ಥಿತರು** :: ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** :: ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, (ಸಹಾಯಕ ಸರ್ಕಾರಿ ಅಭಿಯೋಜಕರು)

**ಬಾಧ್ಯತೆದಾರರು** :: ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:–**

ದಿ:24–08–2011ರಂದು ಮಹೇಂದ್ರ ಪಿಕ್‌ಅಫ್ ಕೆಎ–09–2086ರಲ್ಲಿ ಸಾಗುವಾನಿ ನಾಟಾ ಅಕ್ರಮವಾಗಿ ಸಾಗಿಸುತ್ತಿರುವಾಗ ಜಡೆ ಶಾಖೆ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:24–08–2011 ರಂದು ಆನವಟ್ಟಿ ವಲಯದ ಜಡೆ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ, ಸೊರಬ ತಾಲ್ಲೂಕು ಆನವಟ್ಟಿ ಹೋಬಳಿ, ಲಕ್ಕವಳ್ಳಿ ಗ್ರಾಮದ ಶ್ಯಾನವಳ್ಳಿ ಕಿರು ಅರಣ್ಯ ಪ್ರದೇಶದಲ್ಲಿ ಗಸ್ತು ತಿರುಗುತ್ತಿರುವಾಗ ಒಂದು ವಾಹನ ಮಹೇಂದ್ರ ಪಿಕ್‌ಅಫ್ ಕೆಎ–09–2086ಗೆ ಸಾಗುವಾನಿ ನಾಟಾ ತುಂಬುತ್ತಿರುವುದು ಕಂಡು ಬಂದಿತು, ಈ ವಾಹನದ ಹತ್ತಿರ ನಿಂತಿದ್ದ ಒಬ್ಬ ವ್ಯಕ್ತಿಯನ್ನು ವಿಚಾರಿಸಲಾಗಿ ಅವನ ಹೆಸರು 1. ಮಂಜಪ್ಪ ಬಿನ್ ಫಕೀರಪ್ಪ, ಜಡೆ ಗ್ರಾಮ ಸಾಲಿಗೆ ಮಾಕೊಪ್ಪ ವಾಸಿ, 31 ವರ್ಷ ಈ ವಾಹನದ ಮಾಲೀಕನೆಂದು ಈ ಸಾಗುವಾನಿ

ನಾಟಾವನ್ನು ತಲಗಡ್ಡೆ ಗ್ರಾಮವಾಸಿ ಸುಭಾನ್ ಸಾಬ್ ಪಟೇಲ್ ಬಿನ್ ಗೌಸ್ ಮೊಹಿದ್ದಿನ್ ಸಾಬ್ ಪಟೇಲ್, 45 ವರ್ಷ ಮತ್ತು ಲಕ್ಕವಳ್ಳಿ ಗ್ರಾಮ ವಾಸಿ, ಮಾಲತೇಶ್ ಬಿನ್ ಎಲ್.ಜಿ.ಗುಡ್ಡಪ್ಪ ಎಂಬುವವರು ಕಡಿದು ತಯಾರಿಸಿದ್ದ ನಾಟಾಗಳೆಂದು ಈ ನಾಟಾಗಳನ್ನು ಈ ವಾಹನದಲ್ಲಿ ಸಾಗಿಸಲು ತುಂಬಿ ನಿಲ್ಲಿಸಿರುವುದೆಂದು ಮತ್ತು ಇಲಾಖೆಯವರು ಅವರನ್ನು ಹುಡುಕುತ್ತಿದ್ದಾರೆಂದು ಸುಳಿವು ತಿಳಿದು, ನನ್ನನ್ನು ವಾಹನದ ಹತ್ತಿರ ಇರಲು ಹೇಳಿ ಹೊರಟು ಹೋದವರು ಇಲ್ಲಿಯವರೆಗೂ ಬಂದಿರುವುದಿಲ್ಲ ಎಂದು ತಿಳಿಸಿದನು.

ವಾಹನ ಪರಿಶೀಲಿಸಲಾಗಿ ಅದು ಮಹೇಂದ್ರ ಪಿಕ್‌ಅಫ್ ಕೆಎ–09–2086 ಆಗಿದ್ದು, ಈ ವಾಹನದಲ್ಲಿದ್ದ 08 ಸಾಗುವಾನಿ ನಾಟಾಗಳನ್ನು ಅಳತೆ ಮಾಡಲಾಗಿ 0.795ಎಂ3 ಪ್ರಮಾಣವಿರುತ್ತದೆ. ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಹಾಗೂ ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಆಸಾಮಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 2(14)(15), 24(ಇ), 50, 62, 80, 81, ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಜಡೆ ಶಾಖೆಯ ವನಪಾಲಕ ಅರಣ್ಯ ಮೊಕದ್ದಮೆ ಸಂಖ್ಯೆ:59/11–12ನ್ನು ದಾಖಲಿಸಿರುತ್ತಾರೆ. ನಂತರ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ಸಿಕ್ಕಿಬಿದ್ದ ಆಸಾಮಿಗಳನ್ನು ಜೆ.ಎಂ.ಎಫ್.ಸಿ, ಸೊರಬಕ್ಕೆ ಒಪ್ಪಿಸಿ, ನಂತರ ಈ ವಾಹನ ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸಾಗರದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–21/11–12 ದಿ:17–12–2011ರಂದು ಸಾರಿಗೆ ಅಧಿಕಾರಿ, ಮೈಸೂರು ಇವರಿಗೆ ಪತ್ರ ಬರೆದು ಕೋರಲಾಯಿತು. ಅದರಂತೆ ಸದರಿ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಸಾರಿಗೆ ಅಧಿಕಾರಿ, ಮೈಸೂರು ಇವರು ದಿ:21–01–2012ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿ ಈ ವಾಹನದ ಸಿ.ಸಿ.ಯನ್ನು ದಿ:06–11–1997ರಂದು ಸಾರಿಗೆ ಅಧಿಕಾರಿ, ಯಶವಂತಪುರ (ಉತ್ತರ), ಬೆಂಗಳೂರು ಇವರಿಗೆ ವರ್ಗಾಯಿಸಿದ ಬಗ್ಗೆ 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿರುತ್ತಾರೆ. ಅದರಂತೆ ಸಾರಿಗೆ ಅಧಿಕಾರಿ, ಯಶವಂತಪುರ (ಉತ್ತರ), ಬೆಂಗಳೂರು ಇವರಿಗೆ ಈ ನ್ಯಾಯಾಲಯದಿಂದ ದಿ:25–01–2012 & 11–09–2012ರಲ್ಲಿ ಪತ್ರ ಬರೆದು ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಕೋರಿದೆ. ಆದರೆ ಇಲ್ಲಿಯವರೆಗೂ ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಆದ್ದರಿಂದ ಈ ವಾಹನದ ಆರ್.ಸಿ.ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(i)ರ ಪ್ರಕಾರ ನೋಟೀಸ್ ಜಾರಿಮಾಡಲು ಸಾಧ್ಯವಾಗಿರುವುದಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ–ಸಿಆರ್–23/11–12 ದಿ:26–09–2011ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:24–11–2011ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಹಾಗೂ ದಿ:19–04–2012 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:01–09–2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಆನವಟ್ಟಿ ವಲಯದ ಜಡೆ ಶಾಖೆಯ ವನಪಾಲಕ ಮತ್ತು ಇತರೆ ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತು ವರದಿಯನ್ನು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಮಹೇಂದ್ರ ಪಿಕ್‌ಅಫ್ ಕೆಎ–09–2086 (ಛಾಸ್ಸಿಸ್ ನಂ Not Visible &, ಇಂಜಿನ್ ನಂ: AB41A14581)ನ್ನು ಮತ್ತು ಈ ವಾಹನದಲ್ಲಿದ್ದ, ಸಾಗುವಾನಿ ನಾಟಾ 08=0.795ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:06–10–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್,**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

PR.32

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:22/11-12, ದಿನಾಂಕ:06-10-2012**

| | | |
|---|---|---|
| **ಉಪಸ್ಥಿತರು** | :: | ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, (ಸಹಾಯಕ ಸರ್ಕಾರಿ ಅಭಿಯೋಜಕರು) |
| **ಬಾಧ್ಯತೆದಾರರು** | :: | ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ:-**

ದಿ:17-09-2011ರಂದು ಮಹೇಂದ್ರ ಪಿಕ್‌ಅಫ್ ಕೆಎ-16-ಎಂ-4183ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವಾಗ ಬಟ್ಟೆ ಮಲ್ಲಪ್ಪ ಶಾಖೆ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:17-09-2011 ರಂದು ಹೊಸನಗರ ವಲಯದ ಬಟ್ಟೆ ಮಲ್ಲಪ್ಪ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಹೊಸನಗರ ತಾಲ್ಲೂಕು ಕಸಬಾ ಹೋಬಳಿ, ಕಚ್ಚಿಗೆಬೈಲು ಗ್ರಾಮದ ಸ.ನಂ.06ರ ಅರಣ್ಯ ಪ್ರದೇಶದಲ್ಲಿ ಬೆಳಗಿನ ಜಾವ 4.30ರ ಸಮಯದಲ್ಲಿ ಗಸ್ತು ತಿರುಗುತ್ತಿರುವಾಗ ಒಂದು ವಾಹನಕ್ಕೆ ಮರದ ತುಂಡುಗಳನ್ನು ಎತ್ತಿ ಹಾಕುವ ಶಬ್ದ ಕೇಳಿ ಬಮತು, ಶಬ್ದ ಬಂದ ಕಡೆಗೆ ಹೋಗುವಷ್ಟರಲ್ಲಿ ವಾಹನದಲ್ಲಿದ್ದ ಆಸಾಮಿಗಳು ಇಲಾಖೆಯವರನ್ನು ನೋಡಿ ವಾಹನವನ್ನು ಬಿಟ್ಟು ಕತ್ತಲಲ್ಲಿ ಕಾಡಿನೊಳಗೆ ಓಡಿ ಪರಾರಿಯಾದರು. ವಾಹನ ಪರಿಶೀಲಿಸಲಾಗಿ ಅದು ಮಹೇಂದ್ರ ಪಿಕ್‌ಅಫ್ ಕೆಎ-16-ಎಂ-4183 ಆಗಿದ್ದು, ಈ ವಾಹನದೊಳಗಡೆ ಇದ್ದ 06 ಬೀಟೆ ನಾಟಾಗಳನ್ನು ಅಳತೆ ಮಾಡಲಾಗಿ 1.162ಎಂ3 ಪ್ರಮಾಣವಿರುತ್ತದೆ. ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಹಾಗೂ ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಬಟ್ಟೆ ಮಲ್ಲಪ್ಪ ಶಾಖೆಯ ವನಪಾಲಕ ಅರಣ್ಯ ಮೊಕದ್ದಮೆ ಸಂಖ್ಯೆ:38/11-12ನ್ನು ದಾಖಲಿಸಿರುತ್ತಾರೆ. ನಂತರ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರ ಸಮಕ್ಷಮ ಹಾಜರ್‍ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಈ ವಾಹನ ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸಾಗರದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3-ಅಮೊ-ವಾಹನ-ವಿವ-22/11-12 ದಿ:22-09-2011, 17-12-2011ರಂದು ಸಾರಿಗೆ ಅಧಿಕಾರಿ, ಚಿತ್ರದುರ್ಗ ಇವರಿಗೆ ಪತ್ರ ಬರೆದು ಕೋರಲಾಯಿತು. ಅದರಂತೆ ಸದರಿ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಸಾರಿಗೆ ಅಧಿಕಾರಿ, ಚಿತ್ರದುರ್ಗ ಇವರು ದಿ:16-01-2012ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಆರ್.ಸಿಮಾಲೀಕರ ಹೆಸರು ಶ್ರೀ ಬಸವರಾಜಪ್ಪ ಬಿನ್ ಶಂಕರಪ್ಪ, ಮೆ॥ಶಿವಶಂಕರ್ ಹೊಸ ಟೈರ್ ಮತ್ತು ಟ್ಯೂಬ್ ಮಾರಾಟಗಾರರು, ಭಾಗ್ಯ ಕಾಂಪ್ಲೆಕ್ಸ್, ಬಿ.ಡಿ. ರಸ್ತೆ, ಚಿತ್ರದುರ್ಗ ಎಂದು ನಮೂದಿಸಿರುತ್ತಾರೆ. ಈ ವಾಹನದ ಆರ್.ಸಿ.ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(i)ರ ಪ್ರಕಾರ ದಿ:05-03-2012ರಂದು 30 ದಿನಗಳ ಕಾಲಾವಕಾಶ ನೀಡಿ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಜಾರಿಮಾಡಲಾಗಿದೆ. ಈ ನೋಟೀಸ್‌ಗೆ ಆರ್.ಸಿ.ಮಾಲೀಕರು ಈ ಕೆಳಗಿನಂತೆ ಉತ್ತರಿಸಿರುತ್ತಾರೆ.

1. ನೋಟೀಸ್‌ನಲ್ಲಿ ತಿಳಿಸಿದ ವಾಹನದ ನಂಬರಿನ ಟಾಟಾ ಇಂಡಿಕಾ ಕಾರು ಅವರ ಹತ್ತಿರ ಈಗಾಗಲೇ ಇದೆಯೆಂದು ಜಫ್ತಾದ ವಾಹನ ಅವರದಲ್ಲವೆಂದು ಮತ್ತು ಈ ವಾಹನ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಕರಾರು ಇಲ್ಲವೆಂದು ಕೋರಿರುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3-ಅಮೊ-ವಾಹನ-ಪ್ರಕಟಣೆ-ಸಿಆರ್-23/11-12 ದಿ:26-09-2011ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:24-11-2011ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಹಾಗೂ ದಿ:19-04-2012 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:01-09-2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಹೊಸನಗರ ವಲಯದ ಬಟ್ಟೆ ಮಲ್ಲಪ್ಪ ಶಾಖೆಯ ವನಪಾಲಕ ಮತ್ತು ಇತರೆ ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತು ವರದಿಯನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಮಹೇಂದ್ರ ಪಿಕ್‌ಅಫ್ ಕೆಎ-16-ಎಂ-

4183 (ಛಾಸ್ಸಿಸ್ ನಂ Not Visible &, ಇಂಜಿನ್ ನಂ: 31438682)ನ್ನು ಮತ್ತು ಈ ವಾಹನದಲ್ಲಿದ್ದ, ಬೀಟೆ ನಾಟಾ 06=1.162ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:06–10–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್,**

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**PR.26**

## ತಹಶೀಲ್ದಾರ್ ರವರ ಕಾರ್ಯಾಲಯ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ, ಬೆಂಗಳೂರು.

**ಕಡತ ಸಂಖ್ಯೆ:ಎಲ್.ಎನ್.ಡಿ(ಎನ್.ಎ)ಸಿಆರ್/1405/11–12 ದಿನಾಂಕ:27–12–2012**

**ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಕಲಂ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

**ಪ್ರಕಟಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಬಂಡಿದಾರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

1) ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964 ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಕಲ್ಲುಬಂಡೆ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಕಲ್ಲುಬಂಡೆ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕುದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2) ಸಾರ್ವಜನಿಕ ಹೆದ್ದಾರಿಯ ಹಕ್ಕಿನ ಜೊತೆಗೆ ಸದರಿ ರಸ್ತೆಯ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು, ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನವರಿಗೆ ಅಥವಾ ತಾಲ್ಲೂಕು ತಹಶೀಲ್ದಾರ್ ರವರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೇಮುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರು ಅಥವಾ ತಾಲ್ಲೂಕು ತಹಶೀಲ್ದಾರ್ ರವರಿಗೆ ಪರಿಶೀಲಿಸತಕ್ಕದ್ದು.

**–: ಅನುಸೂಚಿ :–**

| | |
|---|---|
| ರಸ್ತೆಯ ಭಾಗ ಇತ್ಯಾದಿ ಇರುವ ಗ್ರಾಮಗಳು | ಬ್ಯಾಟರಾಯನಪುರ |
| ತಾಲ್ಲೂಕುಗಳು | ಬೆಂಗಳೂರು ಉತ್ತರ (ಅಪರ) ತಾಲ್ಲೂಕು |
| ಜಿಲ್ಲೆ | ಬೆಂಗಳೂರು ನಗರ ಜಿಲ್ಲೆ |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಸರ್ವೆ ನಂ.8/1ಎ ರಲ್ಲಿ 0.01 ಗುಂಟೆ<br>ಸರ್ವೆ ನಂ.8/1ಬಿ ರಲ್ಲಿ 0.02 ಗುಂಟೆ |
| ರಸ್ತೆಯ ಭಾಗ ಅಥವಾ ಭಾಗಗಳ ಸರಿಸುಮಾರು ವಿಸ್ತೀರ್ಣ | 0.03 ಗುಂಟೆ |
| ಮೇರೆ | ಪೂರ್ವ : ರಸ್ತೆ<br>ಪಶ್ಚಿಮಕ್ಕೆ: ಸರ್ವೆ ನಂ.11<br>ಉತ್ತರಕ್ಕೆ: ಸರ್ವೆ ನಂ.9 ಮತ್ತು 10ರ ಜಮೀನು<br>ದಕ್ಷಿಣಕ್ಕೆ: ಸರ್ವೆ ನಂ.7 |
| ಸಾರ್ವಜನಿಕ ರಸ್ತೆ/ಬೀದಿ/ಗಲ್ಲಿ/ದಾರಿ ಅಥವಾ ಅದರ ಭಾಗ | ಸರ್ವೆ ನಂ.8/1ಎ ರಲ್ಲಿ 0.01 ಗುಂಟೆ<br>ಸರ್ವೆ ನಂ.8/1ಬಿ ರಲ್ಲಿ 0.02 ಗುಂಟೆ |
| | |

ತಹಶೀಲ್ದಾರ್.
ಬೆಂಗಳೂರು ಉತ್ತರ (ಅಪರ) ತಾಲ್ಲೂಕು,
ಯಲಹಂಕ, ಬೆಂಗಳೂರು.

**P.R. 144**